


ಸತ್ಯಜಿತ್ ರಾಯ್ ಅವರ

# ಪಥೇರ್ ಪಾಂಚಾಲಿ

(ಚಿತ್ರಲೇಖನ)

ಅನುವಾದ

ಕೆ. ವಿ. ಸುಬ್ಬಣ್ಣ

ನೀನಾಸಮ್ ಚಿತ್ರಸಮಾಜ ಹೆಗ್ಗೋಡು

ಪರವಾಗಿ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

PATHER PANCHALI : (Kannada) translation of the Script of Satyajit Ray's film by K. V. Subbanna ; Printed at Abhinava Mudrana, Sagar and Published by Akhsara Prakashana, Sagar, Karnataka (577 401) ; on behalf of Ninasam Chitrasamaj, Heggodu, Sagar, Karnataka ; First impression : Oct. 1980 ; 90 pages ; Price Rs. 8-00.

ಮುಖಪುಟ : **ಪ್ರಸನ್ನ**

ಬೆಲೆ : ಎಂಟು ರೂಪಾಯಿಗಳು

# ಕೃತಜ್ಞತೆ

ಪ್ರೊ. ಸತೀಶ್ ಬಹಾದುರ್ ಅವರಿಗೆ, ಅಕ್ಷರ, ಜಯಶ್ರೀ, ಸಿ. ಆರ್. ವಿಶ್ವನಾಥ್ ಮತ್ತು ನೀನಾಸಮ್ ಬಳಗದ ಮಿತ್ರರಿಗೆ, ಅಭಿನವ ಮುದ್ರಣದ ಶ್ರೀ ಎ. ಆರ್. ಶ್ರೀನಿವಾಸ ಮತ್ತು ಕೆಲಸಗಾರರ ಬಳಗಕ್ಕೆ,
ಮುಖಪುಟ ರಚಿಸಿಕೊಟ್ಟ ಶ್ರೀ ಪ್ರಸನ್ನ ಅವರಿಗೆ—

# ಸಹಾಯಕ ಸಾಹಿತ್ಯ


1. MONTAGE No.s 5 and 6, July 1966—Special issue on Satyajit Ray—Anandam Film Society, Bombay.

2. Our films and their films by Satyajit Ray, (1976) Orient Longmans Ltd.,

3. Indian Film by Eric Barnauw and S. Krishnaswamy, Columbia University Press.

4. Satyajit Ray—Portrait of a director by Marie Seton—(1971) Dennis Dobson.

5. The Apu Triology—by Robinwood (1972) November Books.

# ಕಿರುದಾರಿಯ ಮೇಲೆ ದೀರ್ಘಕಾಲ

(ಪಥೇರ್ ಪಾಂಚಾಲಿ ಚಿತ್ರನಿರ್ಮಾಣ ಕುರಿತು ಸತ್ಯಜಿತ್ ರಾಯ್ ಅವರ ಸ್ಮರಣೀಯ ಲೇಖನ)



'ಪಥೇರ್ ಪಾಂಚಾಲಿ'ಯ ಚಿತ್ರೀಕರಣದ ಮೊದಲ ದಿನ ನನಗಿನ್ನೂ ಅಷ್ಟು ಚೆನ್ನಾಗಿ ನೆನಪಿದೆ. ಅಕ್ಟೋಬರ್ ತಿಂಗಳ ಹಬ್ಬದ ದಿನಗಳವು. 'ಪೂಜಾ' ಉತ್ಸವಗಳ ಅಂತಿಮ ಸಮಾರಂಭ ಅಂದು ನಡೆದಿತ್ತು. ನಮ್ಮ ಚಿತ್ರೀಕರಣದ ಸ್ಥಳ ಇದ್ದದ್ದು ಕಲ್ಕತ್ತೆಯಿಂದ ಎಪ್ಪತ್ತೈದು ಮೈಲುಗಳ ದೂರದಲ್ಲಿ. ಗ್ರಾಂಡ್ ಟ್ರಂಕ್ ಹೆದ್ದಾರಿಯ ಮೇಲೆ ನಮ್ಮ ವಾಹನ ಅನೇಕ ಚಿಕ್ಕಪುಟ್ಟ ಹಳ್ಳಿಗಳನ್ನು ದಾಟಿ ನಡೆಯುತ್ತಿದ್ದಂತೆ, ತಾಳವಾದ್ಯಗಳ ಶಬ್ದಸಂಭ್ರಮ ಕೇಳಿಬರುತ್ತಿತ್ತು. ಕೆಲವು ಕಡೆಗಳಲ್ಲಿ, ಮನಸೆಳೆಯುವ ದೃಶ್ಯಗಳು ಮಿಂಚಿ ಮನಸ್ಸಿನಲ್ಲಿ ನಾಟಿಕೊಂಡವು. ನಮ್ಮಲ್ಲೊಬ್ಬರು, ಇದು ಅದೃಷ್ಟದ ಸಂಕೇತ ಎಂದರು. ಅದೃಷ್ಟದ ಬಗ್ಗೆ ನನಗೆ ನಂಬಿಕೆಯಿರಲಿಲ್ಲ. ಆದರೂ ಅದನ್ನು ನಂಬುವ ಆಸೆಯಾಗುತ್ತಿತ್ತು. ಎಲ್ಲ ಚಿತ್ರ ನಿರ್ಮಾತೃಗಳಿಗೂ ಹಣ, ಬುದ್ಧಿಮತ್ತೆ, ತಾಳ್ಮೆ ಮುಂತಾದುವಷ್ಟೇ ಅಲ್ಲದೆ ಅದೃಷ್ಟವೂ ಬೇಕೇಬೇಕು. ನಮಗಂತೂ ಅದು ಕೊಂಚ ಹೆಚ್ಚಾಗಿಯೇ ಬೇಕಾಗಿತ್ತು.

ಒಂದು ರೀತಿಯಲ್ಲಿ, ಈ ಮೊದಲನೆಯ ದಿನವೆಂದರೆ ನಮಗೆ ತಾಲೀಮಿನ ದಿನವಾಗಿತ್ತು. ನಾವೆಲ್ಲರೂ ಈ ಕೆಲಸಕ್ಕೆ ಹೊಸಬರೇ. ನಮ್ಮ ಗುಂಪಿನಲ್ಲಿದ್ದ ಎಂಟು ಜನರ ಪೈಕಿ ಒಬ್ಬರಿಗೆ—ನಮ್ಮ ಕಲಾನಿರ್ದೇಶಕ ಬನ್ಸಿಯವರಿಗೆ ಬಿಟ್ಟರೆ ಇನ್ನಾರಿಗೂ ಈ ಅನುಭವವಿರಲಿಲ್ಲ. ನಮ್ಮ ಚಿತ್ರಗ್ರಾಹಕ ಸುಬ್ರತೋ ಇನ್ನೂ ಹೊಸಬ, ನಮ್ಮಲ್ಲಿದ್ದದ್ದು ಹಳೆಯ ವಾಲ್ ಕೆಮೆರಾ. ಅವತ್ತು ನಮಗೆ ಸಿಗಬಹುದಾಗಿದ್ದ ಕೆಮೆರಾ ಅದೊಂದೇ. ಒಂದು ಅನುಕೂಲವೆಂದರೆ, ಆ ಕೆಮೆರಾದಲ್ಲಿ ಲಾಳ ತಿರುಗಿಸುವ ವ್ಯವಸ್ಥೆ ತುಂಬ ಮೃದುವಾಗಿ ಕೆಲಸಮಾಡುವಂಥದಾಗಿತ್ತು. ಶಬ್ದಸಲಕರಣೆ ನಮ್ಮಲ್ಲಿರಲಿಲ್ಲ. ಆ ದಿನ ಚಿತ್ರೀಕರಿಸುವ ದೃಶ್ಯ ಮೂಕವಾಗಿದ್ದರಿಂದ ಅದರ ಅಗತ್ಯವಿರಲಿಲ್ಲ.

ಅವತ್ತು ನಾವು ಚಿತ್ರೀಕರಿಸಬೇಕಾಗಿದ್ದ ಭಾಗ, ಚಿತ್ರದ ಇಬ್ಬರು ಮಕ್ಕಳದ್ದು.

ಅಕ್ಕ, ತಮ್ಮ ಇವರ ಮಧ್ಯೆ ಮುನಿಸು ಉಂಟಾಗಿದೆ. ಇಬ್ಬರೂ ಊರಿನಿಂದ ಹೊರಗೆ ದೂರ ಬಂದಿದ್ದಾರೆ. ಕಾಶ್ ಗಿಡಗಳು ಬೆಳೆದ ಬಯಲಲ್ಲಿ ಓಡೋಡಿ ಬರುತ್ತಾರೆ. ಅಲ್ಲಿ ಅವರಿಗೆ, ಅವರ ಮುನಿಸನ್ನು ಮರೆಸಿಬಿಡುವಂಥ ಮಹದಾಶ್ಚರ್ಯ—ರೈಲುಗಾಡಿಯ ಪ್ರಥಮ ದರ್ಶನ—ಕಾದಿದೆ. ನಾನು ಈ ದೃಶ್ಯದಿಂದಲೇ ಚಿತ್ರೀಕರಣ ಪ್ರಾರಂಭಿಸಲು ಯೋಚಿಸಿದ್ದೆ. ಕಾರಣ, ಈ ದೃಶ್ಯ, ಚಿತ್ರಲೇಖನದಲ್ಲಿ ಕಾಗದದ ಮೇಲೆ ತುಂಬ ಸರಳ ವಾಗಿ ಸೊಗಸಾಗಿ ಮೂಡಿಬಂದಿತ್ತು. ಇಂಥ ದೃಶ್ಯಗಳನ್ನೇ ಮೊದಲು ಮುಗಿಸ ಬೇಕೆಂಬುದು ನಮ್ಮ ಯೋಚನೆಯಾಗಿತ್ತು. ಏಕೆಂದರೆ, ಒಟ್ಟು ಬಂಡವಾಳವಾಗಿ ನಮ್ಮ ಬಳಿ ಬ್ಯಾಂಕಿನಲ್ಲಿದ್ದ ಮೊಬಲಗು ಎಂಟುಸಾವಿರ ರೂಪಾಯಿಗಳು. ಅಷ್ಟೇ ಹಣ ದಲ್ಲಿ ಸಾಧ್ಯವಾದಷ್ಟೂ ಹೆಚ್ಚು ಚಿತ್ರೀಕರಣ ಮುಗಿಸಿಕೊಂಡು, ಅದರ ಆಧಾರದ ಮೇಲೆ ನಮಗೆ ಹಣವನ್ನೊದಗಿಸುವ ನಿರ್ಮಾಪಕನನ್ನು ಹುಡುಕಿಕೊಳ್ಳಬೇಕಾಗಿತ್ತು. ನಮ್ಮ ಚಿತ್ರೀಕರಣ ಈತನಕ ತಡೆದದ್ದಾರೂ ಇದೇ ಕಾರಣಕ್ಕಾಗಿ.

ಮೊದಲ ದಿನ ನಾವು ಎಂಟು ಚಿತ್ರಿಕೆಗಳನ್ನು ಚಿತ್ರಿಸಿಕೊಂಡೆವು. ಮಕ್ಕಳು ತುಂಬ ಸಹಜವಾಗಿ ಅಭಿನಯಿಸಿದ್ದು ನಮ್ಮ ಅದೃಷ್ಟ ಎನ್ನಬೇಕು. ನನ್ನ ಬಗ್ಗೆ ಹೇಳು ವುದಾದರೆ, ತೀರ ಮೊದಲಿಗೆ ನನಗೆ ಏನೋ ಉಸಿರು ಕಟ್ಟಿಕೊಂಡ ಅನುಭವವಾಗು ತ್ತಿತ್ತು. ಆದರೆ ಕೆಲಸ ಪ್ರಾರಂಭವಾಗಿ ಮುಂದುವರಿದಂತೆ ಕ್ರಮೇಣ, ನನ್ನ ನರಗಳು ಸಡಲಿಕೊಂಡವು, ಆರಾಮೆನಿಸಿತು. ತುದಿಯಲ್ಲಿ ಮಾತ್ರ ನನ್ನೊಳಗೇ ನಾನು ಉಬ್ಬಿ ಕೊಂಡಿದ್ದೆ. ಆ ದೃಶ್ಯಸನ್ನಿವೇಶ ಆ ದಿನ ಅರ್ಧ ಮಾತ್ರ ಪೂರೈಸಿತ್ತು. ಹಾಗಾಗಿ ನಾವು ಮುಂದಿನ ಭಾನುವಾರ ಮತ್ತೆ ಅದೇ ಸ್ಥಳಕ್ಕೆ ಹಾಜರಾದೆವು. ಆದರೆ ಆಶ್ಚರ್ಯ ವೆಂದರೆ, ಆ ಸ್ಥಳ ಅದೇ ಎಂದು ನಂಬಲಿಕ್ಕೇ ಬರುವ ಹಾಗಿರಲಿಲ್ಲ, ಅಷ್ಟು ಬದಲಾಗಿ ಬಿಟ್ಟಿತ್ತು. ಕಾಶ್ ಹೂವುಗಳ ಸರೋವರದ ಹಾಗಿದ್ದ ಆ ಬಯಲು, ಇವತ್ತು ಕಂದು ಬಣ್ಣದ ಬರಡು ನೆಲವಾಗಿ ಬಿಟ್ಟಿತ್ತು. ಕಾಶ್ ಹೂವುಗಳು ಬೇಗ ಉದುರಿಹೋಗುತ್ತ ವೆಂಬುದು ನಮಗೆ ಗೊತ್ತಿದ್ದ ಸಂಗತಿಯೇ. ಆದರೆ ಇಷ್ಟು ಬೇಗ ಹೋಗಬಹುದೆಂದು ನಾವು ಎಣಿಸಿರಲಿಲ್ಲ. ಅಷ್ಟರಲ್ಲಿ ಅಲ್ಲಿನವನೇ ಒಬ್ಬ ನಡೆದದ್ದನ್ನು ವಿವರಿಸಿದ. ಆ ಹೂವು ಅಲ್ಲಿನ ಜಾನುವಾರುಗಳಿಗೆ ಒಳ್ಳೆಯ ಮೇವು; ಹಿಂದಿನ ದಿನವಷ್ಟೇ ಜಾನುವಾರು ಗಳು ಬಂದು ಇಡೀ ದೃಶ್ಯವನ್ನೇ ಕಬಳಿಸಿ ಮುಗಿಸಿದ್ದವು.

ಪ್ರಾರಂಭದಲ್ಲೇ ಒಂದು ಭಾರೀ ನಿರಾಶೆ. ಇದಲ್ಲದೆ, ನಮಗೆ ಬೇಕಾದ ದೂರ ಚಿತ್ರಗಳನ್ನು ತೆಗೆದುಕೊಳ್ಳಲಿಕ್ಕೆ ಬರುವಂಥ ಬೇರೆ ಕಾಶ್ ಮೈದಾನ ಹತ್ತಿರದಲ್ಲೆಲ್ಲೂ ಇದ್ದದ್ದು ನಮಗೆ ಗೊತ್ತಿರಲಿಲ್ಲ. ಇದ್ದರೂ ಇಡೀ ದೃಶ್ಯವನ್ನು ಪುನಃ ಅಭಿನಯಿಸಿ ಕೊಳ್ಳಬೇಕಾಗುತ್ತಿತ್ತು. ಹಾಗೆ ಯೋಚಿಸಿದಾಗಲೇ ನಮಗೆ ಎದೆ ಒಡೆದುಹೋಗ ವಂತೆ ಅನ್ನಿಸತೊಡಗಿತ್ತು. ಆದರೆ—ಇದಾಗಿ ಸರೀ ಎರಡು ವರ್ಷಕ್ಕೆ, ಮತ್ತೆ ನಾವು ಅದೇ ಜಾಗಕ್ಕೆ ಬಂದೆವು, ಪಶ್ಚಿಮ ಬಂಗಾಲ ಸರ್ಕಾರ ಕೊಟ್ಟ ಹಣದಿಂದ, ಇದೇ

ತಂಡವನ್ನಿಟ್ಟುಕೊಂಡು ಆ ದೃಶ್ಯವನ್ನು ಮತ್ತೊಮ್ಮೆ ಚಿತ್ರೀಕರಿಸಿಕೊಂಡೇವು ಎಂದು ಯಾರಿಗೆ ತಾನೆ ಊಹೆಯಿತ್ತು ?

'ಪಥೇರ್ ಪಾಂಚಾಲಿ'ಯ ಚಿತ್ರೀಕರಣದ ಪೂರ್ವ ಸ್ಮೃತಿಗಳನ್ನು ಕೆದಕಿಕೊಂಡಾಗ, ಅದು ಆಗ ನನಗೆ ಸಂತೋಷಕ್ಕಿಂತ ಹೆಚ್ಚು ನೋವನ್ನೇ ಉಂಟುಮಾಡಿತ್ತೇ—ಎನ್ನುವುದನ್ನು ನಿರ್ಧಾರವಾಗಿ ಹೇಳಲಾರೆ. ಹಣದ ಅಡಚಣೆಯಿಂದ ಚಿತ್ರೀಕರಣ ನಿಂತುಹೋದಾಗ ಆಗುವ ಮಾನಸಿಕ ತುಮುಲ, ಹೇಳುವಂಥದಲ್ಲ. ದೀರ್ಘಕಾಲ ಚಿತ್ರೀಕರಣ ನಿಲ್ಲಿಸಿ ಸುಮ್ಮನೆ ಕೂರುವ ಒತ್ತಾಯದ ನಿಷ್ಕ್ರಿಯೆ (ಹಾಗೆ ಒಮ್ಮೆಯಲ್ಲ, ಎರಡು ಸಲ ನಾವು ಚಿತ್ರೀಕರಣ ನಿಲ್ಲಿಸಬೇಕಾಗಿ ಬಂತು ; ಆ ಒಟ್ಟೂ ಅವಧಿ ಸುಮಾರು ಒಂದೂವರೆ ವರ್ಷ ಕಾಲ) ಆಳವಾದ ನಿರಾಶೆಯನ್ನಲ್ಲದೆ ಮತ್ತೇನನ್ನುಂಟುಮಾಡಬಲ್ಲದು ? ಇಂಥ ಸನ್ನಿವೇಶದಲ್ಲಿ, ಚಿತ್ರಕತೆಯನ್ನು ಸರಿಗೊಳಿಸುವ ಸಂಭಾಷಣೆಗಳನ್ನು ತಿದ್ದಿಕೊಳ್ಳುತ್ತ ಹೋಗುವ ಕೆಲಸವಿರಲಿ, ಚಿತ್ರಕತೆ ಕಂಡರೇ ಜುಗುಪ್ಸೆಯಾಗುವಷ್ಟು ಮಾನಸಿಕವಾಗಿ ನೋವಾಗಿತ್ತು.

ಆದರೆ, ಕೆಲಸ—ಅದು ಒಂದೇ ದಿನದ ಕೆಲಸವಾಗಿದ್ದರೂ—ಅದರದ್ದೇ ಆದ ಸುಖವನ್ನು ದೊರಕಿಸಿಕೊಡುತ್ತದೆ. ಚಿತ್ರನಿರ್ಮಾಣದ ವಿಲಂಬಪ್ರಕ್ರಿಯೆಯನ್ನು ಹಂತ ಹಂತವಾಗಿ ಅರಿತುಕೊಳ್ಳುತ್ತ ಹೋಗುವುದೇ ಒಂದು ದೊಡ್ಡ ಅವಕಾಶ. ಚಲನಚಿತ್ರ ಮಾಧ್ಯಮದ ಬಗ್ಗೆ ತಜ್ಞರು ರಚಿಸಿಕೊಟ್ಟ ತತ್ತ್ವಗಳನ್ನು ಅರಗಿಸಿಕೊಂಡದ್ದರ ಫಲ ಮನಸ್ಸಿನ ಹಿನ್ನೆಲೆಯಲ್ಲಿ ಕೆಲಸಮಾಡುತ್ತದೆ ನಿಜ ; ಆದರೆ—ಮಾಧ್ಯಮದ ತಂತ್ರಗಳನ್ನು ಬಳಸುವಾಗ ಉಂಟಾಗುವ ಅನುಭವಗಳಿಂದ ನಿಮಗೇ ಅರ್ಥವಾಗತೊಡಗುತ್ತದೆ : ಒಂದು—ತಿಳಿದಿದ್ದೇವೆ ಎಂದುಕೊಂಡಿರುವುದಕ್ಕಿಂತ ಎಷ್ಟೋ ಕಡಿಮೆ ನಿಜವಾಗಿ ತಿಳಿದುಕೊಂಡಿದ್ದು ಎನ್ನುವುದು ; ಎರಡು—ತತ್ತ್ವವನ್ನು ತಿಳಿದುಕೊಳ್ಳುವಷ್ಟರಿಂದ ಎಲ್ಲ ಸಮಸ್ಯೆಗಳಿಗೂ ಉತ್ತರ ಸಿಗಲಾರದೆಂಬುದು ; ಮೂರು—ನಿಮ್ಮ ಮೇಲೆ ಎಂದೋ ಪ್ರಭಾವ ಬೀರಿದ ಒಂದು ಚಿತ್ರ, ಡೊವ್ ಝೆಂಕೊನ 'ಅರ್ತ್' ಎನ್ನಿ, ಅದರಲ್ಲಿ ನಿಮ್ಮನ್ನು ಪರವಶಗೊಳಿಸಿದ ಬೆಳದಿಂಗಳಿನ ನೃತ್ಯ ಎನ್ನಿ, ಈಗ ನಿಮ್ಮ ಆಸ್ತಿವಾರವಾಗಿ ನಿಲ್ಲಲಾರದು ; ನೀವು ನಿಂತ ನೆಲದಿಂದಲೇ ನಿಮ್ಮ ಚಿತ್ರ ಹುಟ್ಟಿಕೊಳ್ಳಬೇಕು—ಎನ್ನುವುದು.

ಬಿಭೂತಿ ಭೂಷಣ ಬ್ಯಾನರ್ಜಿಯವರ ಕಾದಂಬರಿ 'ಪಥೇರ್ ಪಾಂಚಾಲಿ' ೧೯೩೦ ರಲ್ಲೇ ಒಂದು ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ಆ ಕಾದಂಬರಿಯ ಲೇಖಕ ಒಬ್ಬ ಹಳ್ಳಿಗ ಹಾಗೂ ಆತನ ಬದುಕೇ ಆ ಕಾದಂಬರಿಯ ಮೂಲ ಸಾಮಗ್ರಿ. ಆ ಕಾದಂಬರಿಯಲ್ಲಿ ಸಾಕಷ್ಟು ಕಥೆ ಇಲ್ಲ ಎಂಬ ಕಾರಣದಿಂದಲೇ ಪ್ರಕಾಶಕರೆಲ್ಲಾ ಅದನ್ನು ಪ್ರಕಟಿಸಲು ನಿರಾಕರಿಸಿದ್ದರು. ಆ ಪತ್ರಿಕೆ ಕೂಡಾ, ಮೊದಮೊದಲು, ಅದನ್ನು ಪ್ರಕಟಿಸಲು ಅನುಮಾನ ಮಾಡಿತ್ತು. ಆಮೇಲೆ ಓದುಗರು ಇಷ್ಟ

ಹಡದಿದ್ದರೆ ಅದನ್ನು ಮಧ್ಯದಲ್ಲೇ ನಿಲ್ಲಿಸುವ ಷರತ್ತಿನ ಮೇಲೆ ಅದನ್ನು ಪ್ರಕಟಿಸಲು ಒಪ್ಪಿತ್ತು. ಆದರೆ ಪ್ರಥಮ ಕಂತಿನಿಂದಲೇ ಅಪೂ ಮತ್ತು ದುರ್ಗಾರ ಕಥೆ ತುಂಬ ಯಶಸ್ವಿಯಾಗಿತ್ತು ಮತ್ತು ಅನಂತರ ಎರಡುವರ್ಷಗಳಲ್ಲೇ ಪ್ರಕಟಗೊಂಡ ಆ ಕಾದಂಬರಿ ಯಶಸ್ಸು-ಹಣ ಎರಡೂ ದೃಷ್ಟಿಯಿಂದಲೂ ಪ್ರಸಿದ್ಧವಾಗಿಬಿಟ್ಟಿತು.

ನಾನು 'ಪಥೇರ್ ಪಾಂಚಾಲಿ' ಕಾದಂಬರಿಯನ್ನು ಆರಿಸಿದ್ದಕ್ಕೆ ಕಾರಣ ಅದ ರೊಳಗಿದ್ದ ಮಾನವೀಯ ಕಳಕಳಿ, ಕಾವ್ಯಮಯತೆ ಮತ್ತು ನಿಷ್ಠುರ ಸತ್ಯದ ಪ್ರತಿ ಪಾದನೆಗಾಗಿ. ಆ ಕಥೆಯನ್ನು ಬಹಳಷ್ಟು ರಿಪೇರಿ ಮಾಡಿ ಅದಕ್ಕೊಂದು ರೂಪ ಕೊಡ ಬೇಕೆಂದು ನಾನು ಮೊದಲೇ ಯೋಚಿಸಿದ್ದೆ. ಕಾದಂಬರಿಯ ಮೊದಲಭಾಗಕ್ಕಿಂತ ಮುಂದೆ ನನಗಿನ್ನೂ ಓದಲು ಸಾಧ್ಯವಾಗಿರಲಿಲ್ಲ. ಆಗ ನನಗನ್ನಿಸಿತ್ತು—ಇದನ್ನು ನೇರವಾಗಿ ಕಥೆ ಹೇಳುವಂತೆ ರೂಪಿಸುವ ಬದಲು ಕಾದಂಬರಿಯಲ್ಲಿದ್ದಂತೆ ಕಥೆ ಅತ್ತಿತ್ತ ಅಡ್ಡ ಚಲಿಸುತ್ತ ಚಂಚಲವಾಗಿಯೇ ಮುನ್ನಡೆಯಬೇಕು ಎಂದು. ಹಾಗೆ ಚಂಚಲ ವಾಗಿ ಮುಂದುವರೆಯುವಂಥ ರಚನೆಯಲ್ಲೇ ಅದು ಅಧಿಕೃತವಾಗುತ್ತದೆ ಎಂದೂ ನಾನು ಭಾವಿಸಿದ್ದೆ.

ಈ ಹಂತದಲ್ಲಿ ರೂಪ, ಲಯ ಮತ್ತು ಚಲನೆಗಳು ನನ್ನನ್ನು ಅಷ್ಟಾಗಿ ತಲೆ ಕೆಡಿಸಲಿಲ್ಲ. ನನ್ನ ಕೇಂದ್ರ ಸ್ಪಷ್ಟವಾಗಿತ್ತು—ಗಂಡ, ಹೆಂಡತಿ, ಎರಡು ಮಕ್ಕಳು, ಮುದುಕಿ—ಈ ಕುಟುಂಬ. ಲೇಖಕರೇ ಕಂಡುಕೊಂಡಂತೆ ಈ ಪಾತ್ರಗಳ ಮಧ್ಯೆ ಕಂಡುಬರುವ ಸೂಕ್ಷ್ಮವಾದ ತಾಕಲಾಟಗಳೇ—ಕಥೆಯ ವಸ್ತು. ನಾನು ದೃಷ್ಟಿ ಯೊಳಗಿಟ್ಟುಕೊಂಡ ಅವಧಿ ಒಂದು ವರ್ಷದ್ದು. ಅಲ್ಲದೆ ಸ್ಪಷ್ಟವಾಗಿ ತೋರಿಸಬೇಕಿದ್ದ ಎರಡು ವಿರುದ್ಧ ಮುಖಗಳ ಭಿನ್ನತೆ ಇಲ್ಲಿತ್ತು—ದೃಶ್ಯಾತ್ಮಕವಾದವು ಮತ್ತು ಭಾವ ನಾತ್ಮಕನಾದವು, ಶ್ರೀಮಂತಿಕೆ ಮತ್ತು ಬಡತನ, ನಗೆ ಮತ್ತು ಕಣ್ಣೀರು ; ಹಳ್ಳಿಗಳ ಸೌಂದರ್ಯ ಮತ್ತು ಅಲ್ಲಿ ಅಡಕವಾಗಿರುವ ಬಡತನ. ಸಹಜವಾದ ಕಥೆಯ ಎರಡು ಭಾಗಗಳು ಎರಡು ಸಾವಿನೊಡನೆ ಹೆಣೆದುಕೊಳ್ಳುವ ರಚನೆ ಕಥೆಯಲ್ಲೇ ನನಗೆ ದೊರಕಿತ್ತು.

ಆದರೆ ಕಥೆಯ 'ಸಾಮಾಜಿಕ-ಆವರಣ'ದ ಸ್ಪಷ್ಟ ಪರಿಚಯ ನನಗಿರಲಿಲ್ಲ. ನಾನು ಇದಕ್ಕೂ ಕಾದಂಬರಿಯನ್ನೇ ಆಧರಿಸಬಹುದಿತ್ತು. ಆ ಕಾದಂಬರಿ ಒಂದರ್ಥ ದಲ್ಲಿ ಗ್ರಾಮೀಣ ಬಂಗಾಳೀ ಬದುಕಿನ ವಿಶ್ವಕೋಶ. ಆದರೆ ಅದಷ್ಟೇ ಸಾಲುವುದಿಲ್ಲ ಎಂದೂ ನನಗೆ ತಿಳಿದಿತ್ತು. ಹೇಗೂ, ಆ ಕಾದಂಬರಯಂಥ ಅಧಿಕೃತ ಹಳ್ಳಿಯೊಂದಕ್ಕೆ ಹೋಗಲು ನಗರದಿಂದ ೫ ಮೈಲಿ ಮಾತ್ರ ಹೋದರೆ ಸಾಕಿತ್ತು.

ನನ್ನ ಹಳ್ಳಿಯ ಓಡಾಟಗಳು ಭೌತಿಕವಾಗಿ ಸಾಹಸವೇನೂ ಅಲ್ಲದಿದ್ದರೂ ಹೊಸ ಅನುಭವದ ಪ್ರಪಂಚ ಅಲ್ಲಿ ನನ್ನ ಕಣ್ಣಿಗೆ ತೆರೆಯಿತು. ನಗರದಲ್ಲಿ ಹುಟ್ಟಿ ಬೆಳೆದ ಒಬ್ಬನಿಗೆ, ಈ ಅನುಭವ ಹೊಸ ರುಚಿಯದಾಗಿ ಸೆಳೆಯಿತು. ಅಲ್ಲಿನ ವಸ್ತು

ವಿವರಗಳು, ಅಲ್ಲಿನ ಮಾತು, ಮೂಕಾಭಿನಯಗಳು, ಭಾಷೆಯ ವಿಶಿಷ್ಟ ತಿರುವುಗಳು ಈ ಎಲ್ಲವನ್ನೂ ಗಮನಿಸುವುದು ಅಲ್ಲಿನ ಬದುಕಿನ ಒಳಕ್ಕೆ ಇಳಿದುಕೊಳ್ಳಲು ಸಹಾಯಕ ವಾಯಿತು. ಅಲ್ಲಿನ 'ಆವರಣ'ಗಳಲ್ಲಿ ಮುಳುಗಿ ನೋಡುವುದೇ ಒಂದು ಆಸಕ್ತಿ. ಅಲ್ಲಿನ ಅನುಭವಗಳನ್ನು ದೃಶ್ಯ ಮತ್ತು ಶಬ್ದಗಳಿಂದ ಗ್ರಹಿಸುವುದು ಹೇಗೆ? ಇಲ್ಲಿನ ಮುಂಬೆಳಗು ಮತ್ತು ಮುಸ್ಸಂಜೆ—ಇವುಗಳ ಸೂಕ್ಷ್ಮ ವ್ಯತ್ಯಾಸ ಕಾಣುವುದು ಹೇಗೆ? ಮುಂಗಾರು ಮಳೆಯ ಅನಂತರದ ತಂಪಾದ ಬೂದು ಸ್ತಬ್ದತೆಯನ್ನು ವ್ಯಕ್ತ ಗೊಳಿಸುವುದು ಹೇಗೆ? ವಸಂತಮಾಸದ ಸೂರ್ಯಕಿರಣಕ್ಕೂ ಚಳಿಗಾಲದ ಸೂರ್ಯ ಕಿರಣಕ್ಕೂ ವ್ಯತ್ಯಾಸವೇನು? ಈ ಎಲ್ಲವನ್ನೂ ನರಗಳಲ್ಲಿ ಅನುಭವಿಸಿಕೊಳ್ಳಬೇಕಾ ಗಿತ್ತು.

ನೀವು ಒಳಹೊಕ್ಕಷ್ಟೂ ಇವು ತೆರೆದುಕೊಳ್ಳುವಂಥವು. ಈ ಪರಿಚಯದಿಂದ ಬೇಸರ ಹುಟ್ಟುವುದಿಲ್ಲ ಪ್ರೀತಿ ಹುಟ್ಟುತ್ತದೆ, ತಾಳ್ಮೆ ಹುಟ್ಟುತ್ತದೆ. ಚಿತ್ರನಿರ್ಮಾಣದ ತಲೆಬಿಸಿಗಳು ಹಿಂಸರಿಯುತೊಡಗುತ್ತದೆ. ಕೆಮೆರಾದ ಅಗತ್ಯವೇ ಕಡಿಮೆಯಾಗತೊಡ ಗುತ್ತದೆ. ಕೆಮೆರಾ ಬರೀ ದಾಖಲೆಯ ಯಂತ್ರವಷ್ಟೇ ಅಲ್ಲವೇ ಎನಿಸತೊಡಗುತ್ತದೆ. ಮುಖ್ಯವಾದ ಸಂಗತಿ ವಾಸ್ತವವಾದ ಸತ್ಯ. ಅದನ್ನು ಮುಟ್ಟಿದರೆ ಸಾಕು, ನೀವು ನಿಮ್ಮ ಮೇರು ಸಾಧನೆಯನ್ನೇ ಮುಟ್ಟಿದ ಹಾಗೆ.

ಆದರೆ ಇವೆಲ್ಲ ಎಂಥ ಸುಳ್ಳು! ಚಿತ್ರೀಕರಣ ಸ್ಥಳದಲ್ಲಿ ನಿಂತಕೂಡಲೇ ನಿಮ್ಮನ್ನು ಮೂರು ಕಾಲಿನ ಯಂತ್ರ ಆಳತೊಡಗುತ್ತದೆ. ಸಮಸ್ಯೆಗಳು ಗೋಜಲು ಗೋಜಲಾಗಿ ಬರುತ್ತವೆ. ಕೆಮೆರಾ ಎಲ್ಲಿಡುವುದು? ಮೇಲೋ ಕೆಳಗೋ? ದೂರವೋ ಹತ್ತಿರವೋ? ನೆಲದ ಮೇಲೋ ಶಕಟದ ಮೇಲೊ? ಲೆನ್ಸ್, ಮೂವತ್ತೈದು ಸರಿಯೋ ಅಥವಾ ಹಿಂಸರಿದು ಐವತ್ತನ್ನೇ ಬಳಸಬೇಕೋ? ಈ ಎಲ್ಲ ಸಮಸ್ಯೆಗಳಿಗೆ ಕೂಡಕೂಡಲೇ ನೀವು ಉತ್ತರ ಹುಡುಕಬೇಕು. ತಡಮಾಡಿದರೆ ಸೂರ್ಯ ಮುನ್ನಡೆದುಬಿಡುತ್ತಾನೆ. ನಿಮ್ಮ ಬೆಳಕಿನ ಸಾಂಗತ್ಯ ಹಾಸ್ಯಾಸ್ಪದವಾಗುತ್ತದೆ.

ಶಬ್ದವೂ ಒಂದು ಸಮಸ್ಯೆ. ಸಂಭಾಷಣೆ ಕನಿಷ್ಠಸಾಧ್ಯ ಮಟ್ಟಕ್ಕೆ ಇಳಿಸಲ್ಪಡು ತ್ತಿದೆ. ಆದರೆ ಅದನ್ನು ಇನ್ನೂ ಇಳಿಸಬೇಕಾಗಿದೆ. ಆ ಮೂರು ಶಬ್ದಗಳು ಬೇಕೇ ಅಥವಾ ಅದರ ಬದಲು ಒಂದು ಅಭಿನಯವನ್ನು ಹುಡುಕಲಾದೀತೆ? ವಿಮರ್ಶಕರು ಮೂಕಿ ಯುಗದ ತಂತ್ರದ ಪುನಃಸೃಷ್ಟಿಯೆಂದು ಗೇಲಿ ಮಾಡಿಯಾರು. ಆದರೆ ನಿಮಗೆ, ನಿಮ್ಮ ಹೃದಯದೊಳಗೆ, ಸಂಭಾಷಣೆಯನ್ನು ಕನಿಷ್ಠಕ್ಕೆ ಇಳಿಸಿ ಈ ತಲೆಬಿಸಿಯನ್ನು ಶಬ್ದಚಿತ್ರಕ್ಕಾಗುವ ಖರ್ಚುಗಳನ್ನು ಉಳಿಸಬೇಕೆನ್ನಿಸುತ್ತಿದೆಯಲ್ಲ.

ಖರ್ಚು, ಎಲ್ಲಾ ಕಾಲದಲ್ಲೂ ಚಿತ್ರನಿರ್ಮಿತಿಯ ಶೈಲಿಯನ್ನೇ ಹತೋಟಿಯಲ್ಲಿ ಡುವ ಒಂದು ಮುಖ್ಯ ವಸ್ತು, ನಿಜ. ಆದರೆ ಇನ್ನೊಂದು ಮುಖ್ಯವಾದ ಸಂಗತಿ— ಇದನ್ನು ಸಾಧಾರಣೀಕರಣ ಮಾಡಲು ನನಗಿಷ್ಟವಿಲ್ಲ—ಮನುಷ್ಯರ ಮನಸ್ಸಿನದು.

ನನ್ನ ನಟರೊಡನೆ ವ್ಯವಹರಿಸುವಾಗ ಇಂಥವರು ಇಂತಿಷ್ಟು ಪ್ರಮಾಣದ ಕಚ್ಚಾವಸ್ತು ವಾಗಿ ಪೂರ್ಣ ಚಿತ್ರ ತಯಾರಿಕೆಗೆ ಬಳಸುವ ಸಾಧನ—ಎಂಬಷ್ಟು ನಿರ್ಲಿಪ್ತತೆಯಿಂದ ನಾನಿರಲಾರೆ. ಹದಿನೆಂಟರ ಒಬ್ಬ ಹುಡುಗಿಯನ್ನು ಉರಿಬಿಸಿಲಿನಲ್ಲಿ ನಿಲ್ಲಿಸಿ ಸರಿಬರದ ಸಂಭಾಷಣೆ ನಟನೆಗಳನ್ನು ಕಣ್ಣು ಅರೆಮುಚ್ಚಿ ಪರಿಶೀಲಿಸಿಕೊಳ್ಳುತ್ತ ನಿಷ್ಕೃಷ್ಟವಾದ ಫಲಿತಾಂಶಕ್ಕೆ ಕಾಯುವುದಾದರೂ ಹೇಗೆ ? ಇದರರ್ಥ ಕಡಿಮೆ ತಾಲೀಮು ಮತ್ತು ಕಡಿಮೆ ಚಿತ್ರಣವಾದರೂ ಆದೀತು ಎಂದಂತೆ.

ಕೆಲವು ಬಾರಿ ಅದೃಷ್ಟ ಖುಲಾಯಿಸಿ ಮೊದಲ ಚಿತ್ರಿಕೆಯೇ ನೀವು ಬೇಕೆನ್ನು ವಂತೆ ಬಂದು ಬಿಡುತ್ತದೆ. ಆದರೆ ಕೆಲವು ಬಾರಿ ನಿಮ್ಮ ಆಸೆ ಈಡೇರದೆ ಅದು ಸಾಧ್ಯವೇ ಇಲ್ಲ ಎಂಬಷ್ಟು ಹತಾಶರಾಗುವುದೂ ಉಂಟು. ಚಿತ್ರಣಗಳ ಸಂಖ್ಯೆ ಏರಿದಂತೆ ಖರ್ಚಿನ ಬಾಬತ್ತು ಏರುತ್ತದೆ. ಹಾಗಾದಂತೆ ನೀವು ನಿಷ್ಕೃಷ್ಟತೆಯ ಯೋಚನೆ ಬಿಡುತ್ತೀರಿ—ವಿಮರ್ಶಕರು ಕ್ಷಮಿಸಿಯಾರು, ಪ್ರೇಕ್ಷಕರು ನೋಡದೇ ಇದ್ದಾರು ಎಂಬ ನಿರೀಕ್ಷೆಯಿಂದ. ಆಮೇಲೆ ನೀವೆಂದುಕೊಂಡಷ್ಟೇನೂ ಕೆಟ್ಟದ್ದಾಗಿಲ್ಲ ಎಂದು ನೀವು ಆಶ್ಚರ್ಯಪಡಲೂ ಬಹುದು.

ಹಾಗೆ ಹಾಗೇ ಮುಂದುವರೆಯುತ್ತದೆ, ಅದು ಮತ್ತು ಇದನ್ನು ಸಮತೂಕ ಗೊಳಿಸುತ್ತ ಹೋಗುವ ಕಾರ್ಯ. ಹಾಗೆಯೇ ಇದು ಹೇಗಾದರೂ ಕಲಾಕೃತಿಯಾಗಿ ಹೊರಬಂದೀತು ಎಂದು ಪರೀಕ್ಷೆ ಮಾಡುತ್ತೀರಿ ನೀವು. ಒತ್ತಡ ತುಂಬಾ ಹೆಚ್ಚಾದಾಗ ಬಿಟ್ಟೇ ಬಿಡೋಣ ಎಂದು ಯೋಚಿಸುತ್ತೀರಿ, ಅದು ನಿಮ್ಮನ್ನು ಹತ ಮಾಡುತ್ತಿದೆ ಯೆಂದುಕೊಳ್ಳುತ್ತೀರಿ. ಕನಿಷ್ಠ ನಿಮ್ಮಲ್ಲಿರುವ 'ಕಲೆ'ಯ ಭಾಗ ಇಂಗಿಹೋಗುತ್ತ ದೆಂದೂ ಚಿಂತಿಸುತ್ತೀರಿ. ಆದರೆ ಬಹಳಷ್ಟು ಜನ ಇದರಲ್ಲಿ ಕೈಹಾಕಿಕೊಂಡು ಬಿಟ್ಟಿ ದ್ದಾರಲ್ಲಾ ಎಂದು ನೀವು ಮುಂದುವರಿಯುತ್ತೀರಿ ಮತ್ತು ಕಡೇ ಚಿತ್ರಿಕೆ ತೆಗೆದಾದ ಮೇಲೆ ನಿಮಗೇ ಆಶ್ಚರ್ಯವಾಗುತ್ತದೆ. ಇದು ಮುಗಿದುಹೋಯಿತೆಂಬ ಖುಷಿ ನಿಮಗುಂಟಾಗಲಿಲ್ಲ ; ಯಾವುದೋ ವಿಷಾದ ನಿಮ್ಮನ್ನು ಮುಸುಕಿಬಿಟ್ಟಿರುತ್ತದೆ. ಈ ಭಾವನೆ ನಿಮ್ಮೊಬ್ಬರಿಗೇ ಅಲ್ಲ. ೩೦ ವರ್ಷಗಳ ನಂತರ ಮತ್ತೆ ಚಿತ್ರರಂಗಕ್ಕೆ ಪಾದಾ ರ್ಪಣ ಮಾಡಿದ "ಮುದುಕಿ"ಯಿಂದ ಹಿಡಿದು ಜೇಡರಹುಳು ಮತ್ತು ಸತ್ತಕಪ್ಪೆ ತಂದು ಕೊಡುತ್ತಿದ್ದ ಹುಡುಗನವರೆಗೆ ಎಲ್ಲರೂ ಇದೇ ಭಾವನೆ ಹಂಚಿಕೊಂಡಿದ್ದಾರೆ.

ಈ ಮಾಧ್ಯಮದ ಸೃಷ್ಟಿಕ್ರಿಯೆಯ ಲಯ ಅದರ ಎಲ್ಲಾ ಕಷ್ಟಕೋಟಲೆ ಗಳನ್ನೂ ಮೀರಿ ನನಗೆ ಖುಷಿ ಕೊಡುತ್ತದೆ. ಇಂಥದೊಂದು ಸನ್ನಿವೇಶ ಯೋಚಿಸಿ : ಹದಿಹರೆಯದ ಹುಡುಗಿ ಮಳೆ ಬಂದಾಗ ತನ್ನ ಯಾವುದೋ ಅವ್ಯಕ್ತ ದೈಹಿಕ ಬಾಂಧವ್ಯದಿಂದ ಮಳೆಗೆ ತೆರೆದು ತೊಯ್ಯುವ ದೃಶ್ಯವನ್ನೇ ತೆಗೆದುಕೊಳ್ಳಿ. ದೊಡ್ಡ ದೊಡ್ಡ ಹನಿ ಆಕೆಯ ಮೈಮೇಲೆ ಬಿದ್ದು ಆಕೆಯನ್ನು ತೋಯಿಸುತ್ತಿದ್ದಂತೆ ಆಕೆ ಕುಣಿಯುತ್ತಾಳೆ. ಸಂತೋಷದಿಂದ ನಲಿಯುತ್ತಾಳೆ. ಈ ದೃಶ್ಯ ನಿಮ್ಮನ್ನು ತುಂಬ

ಸೆಳೆಯುತ್ತವೆ. ಇದರಲ್ಲಿ ದೃಶ್ಯವಸ್ತುವನ್ನು ತುಂಬ ಸೊಗಸಾಗಿ ಗ್ರಹಿಸಬಹುದಷ್ಟೇ ಅಲ್ಲ. ಈಕೆಯ ಈ ಖುಷಿ ಮುಂದೆ ಸಾವಿಗೆ ಕಾರಣವಾಗುವ ಸೂಚನೆ ನಿಮ್ಮನ್ನು ಹಿಡಿದಿಡುತ್ತದೆ.

ದೃಶ್ಯವನ್ನು ಚಿತ್ರಿಕೆಗಳಾಗಿ ಒಡೆಯಿರಿ, ಅದಕ್ಕೆ ಟಿಪ್ಪಣಿ ಮತ್ತು ರೇಖಾಚಿತ್ರ ತಯಾರಿಸಿ. ಅನಂತರ ಆ ಚಿತ್ರವನ್ನು ಜೀವಗೊಳಿಸುವ ಸಮಯ ಒಮ್ಮೆ ಬಯಲಿಗೆ ಹೋಗಿ ಅಗಲಕ್ಕೆ ಕಣ್ಣಾಡಿಸಿ ನಿಮ್ಮ ಚಿತ್ರೀಕರಣಕ್ಕೆ ಸ್ಥಳ ಆರಿಸಿ. ಮಳೆ ಮೋಡಗಳು ಕಟ್ಟುತ್ತಿವೆ. ಕೆಮೆರಾ ಹೊಂದಿಸುತ್ತೀರಿ. ಅವಸರದ ಕಡೆಯ ತಾಲೀಮು ಮಾಡು ತ್ತೀರಿ. ಕೂಡಲೇ "ಚಿತ್ರಣ". ಆದರೆ ಇಷ್ಟೇ ಸಾಲದು, ಇದು ಚಿತ್ರದಲ್ಲೇ ಮುಖ್ಯ ಚಿತ್ರಿಕೆ, ಮಳೆ ಬೀಳುತ್ತಿರುವಾಗಲೇ ಇನ್ನೊಂದು ಚಿತ್ರಣ ತೆಗೆದಿಟ್ಟುಕೊಂಡಿರಬೇಕು.

ಮುಂದೆ ಸಂಸ್ಕರಣ ಶಾಲೆಗೆ ಕಾಯುತ್ತಾ ಬೆವರುತ್ತೀರಿ—ಇದು ಸಪ್ಟೆಂಬರ್—ನೆಗೆಟಿವ್ ಭೂತ ನಿಧಾನವಾಗಿಯೇ ಯಥಾವತ್ ಹೊರಬರುತ್ತದೆ. ಈ ಪ್ರಕ್ರಿಯೆಗಳಿಗೆ ಗಡಿಬಿಡಿ ಇಲ್ಲ. ಆಮೇಲೆ ಮುದ್ರಣ-ದೈನಿಕಗಳು. ನೋಡಲು ಪರವಾಯಿಲ್ಲ ಅಂದು ಕೊಳ್ಳುತ್ತೀರಿ ನಿಮ್ಮೊಳಗೇ. ಆದರೆ ತುಂಡು ತುಂಡು ಮಾತ್ರ ನೋಡಿ ನಿಮಗೆ ತೃಪ್ತಿ ಯಾಗಿದೆ. ಇಡೀ ರೂಪ ಕಂಡಿಲ್ಲ ನೀವಿನ್ನೂ. ಇವೆಲ್ಲ ಹೇಗೆ ಕೂಡಿಯಾವು ? ನಿಮ್ಮ ಸಂಕಲನಕಾರರೊಡನೆ ಸಂಕಲನಕ್ಕೆ ನುಗ್ಗುತ್ತೀರಿ. ಅಲ್ಲಿ ಏಕಾಂತದ ವೇಳೆ ಕಾಯು ತ್ತೀರಿ—ನೋವಿನ ಪ್ರತೀಕ್ಷೆಯೊಂದಿಗೆ. ಅಲ್ಲಿ ನಡೆಯುವುದು ಸದಾ ತಾಳ್ಮೆಯ ಕತ್ತರಿಸುವ ಕೆಲಸ. ಅಂತ್ಯದಲ್ಲಿ ಮೋವಿಯೋಲಾದ ಮೇಲೆ ನೀವದನ್ನು ನೋಡು ತ್ತೀರಿ. ಆ ಹಳೆಯ ಯಂತ್ರ ಕೂಡ ಆ ಚಿತ್ರದ ಸೊಬಗನ್ನು ಇಳಿಸಲಾರದಾಗಿದೆ.

ಇದಕ್ಕೆ ಸಂಗೀತ ಬೇಕೆ ಅಥವಾ ಚೂರುಪಾರು ಸಾಂದರ್ಭಿಕ ಶಬ್ದಗಳು ಸಾಕೇ? ಆದರೆ ಅದು ಸೃಷ್ಟಿಕ್ರಿಯೆಯ ಮುಂದಿನ ಹಂತ. ಅಲ್ಲಿಯ ತನಕ ನೀವು ಕಾಯಲೇ ಬೇಕು. ಆಮೇಲೆ, ಆಮೇಲೆ ಮಾತ್ರವೇ ನೀವು ಹೇಳಬಹುದು (ಹಾಗೆ ಹೇಳಲು ಬೇಕಾದ ವಸ್ತುನಿಷ್ಠತೆ ನಿಮಗೆ ಸಾಧ್ಯವಾಗುವುದಾದರೆ) ನಿಮ್ಮ ಆ ಮಳೆಯ ನರ್ತನ ಸೊಗಸಾಗಿ ಮೂಡಿದೆಯೇ ಎಂಬುದನ್ನು.

ಆದರೆ ಇಂಥಾ ನಿರ್ಲಿಪ್ತತೆ ಇಂಥ ವಸ್ತುನಿಷ್ಠತೆ ಸಾಧ್ಯವೆ ? ನೀವು ಕಷ್ಟಪಟ್ಟು ಪ್ರಾಮಾಣಿಕವಾಗಿ ದುಡಿದಿದ್ದಿರೆಂದು ನಿಮಗೆ ಗೊತ್ತು. ಹಾಗೆಯೆ ಎಲ್ಲರೂ ದುಡಿದಿ ದ್ದಾರೆ. ಅದೇ ವೇಳೆ ಕೆಲವು ಬದಲಾವಣೆ ಕೆಲವು ಹೊಂದಾಣಿಕೆ—ಸರಿಯಾದ ಕಾರಣ ಕ್ಕಾಗಿಯೇ—ಮಾಡಬೇಕಾಗಿದ್ದರ ಅರಿವು ನಿಮಗಿದೆ. ಒಟ್ಟೊ ಇದು ನೋಡುವ ಅವರಿಗೆ ಹಿಡಿಸೀತೇ ಇಲ್ಲವೇ ? ಕಡೆಗೂ ನಿಮ್ಮ ತೃಪ್ತಿಯೇ ಕೊನೆಯ ಗುರಿಯೇ ಅಥವಾ ಅವರ ಮೆಚ್ಚುಗೆಯೇ ? ಸ್ಪಷ್ಟವಾಗಿ ಹೇಳಲು ಬಾರದು. ಆದರೆ ಒಂದು ವಿಷಯ ಸ್ಪಷ್ಟ—ಅದನ್ನು ಮಾಡಲು ನೀವು ತಕ್ಕ ಯೋಗ್ಯತೆ ಪಡೆದುಕೊಂಡಿದ್ದೀರಿ.

# ಸತ್ಯಜಿತ್ ರಾಯ್ ಮತ್ತು ಅಪೂ ತ್ರಿವಳಿ

ಫ್ರಾನ್ಸ್‌ನಲ್ಲಿ **ಲುಮಿಯೇರ್ ಸಹೋದರರು** ಸಿನೆಮಾ ಕಂಡುಹಿಡಿದು ಮೊದಲ ಪ್ರದರ್ಶನ ಕೊಟ್ಟ ಆರೇಳು ತಿಂಗಳುಗಳಲ್ಲೇ ಮುಂಬೈನಲ್ಲೂ ಪ್ರದರ್ಶನಗಳು ಪ್ರಾರಂಭ ಗೊಂಡವು. ಇಂಡಿಯಾ ರಷ್ಯಾಗಳೆರಡರಲ್ಲೂ ಒಂದೇ ದಿನದಂದು (೧೮೯೬ರ ಜುಲೈ ೭) ಸಿನೆಮಾದ ಮೊತ್ತಮೊದಲ ಪ್ರದರ್ಶನ ನಡೆಯಿತು. ಮೂರು ನಾಲ್ಕು ವರ್ಷ ಕಳೆಯು ವುದರಲ್ಲಿ ಮುಂಬೈನಲ್ಲಿ ಇಲ್ಲಿನವರೇ ಚಿತ್ರೀಕರಣದಲ್ಲಿ ತೊಡಗಿದ್ದರು. ಈ ಶತಮಾನದ ಮೊದಲ ಎರಡು ದಶಕಗಳಲ್ಲಿ **ದಾದಾಸಾಹೇಬ್ ಫಾಲ್ಕೆ**ಯಂಥ ಸಾಹಸಿಗಳು ಭಾರತೀಯ ಚಲನಚಿತ್ರವನ್ನು ರೂಪುಗೊಳಿಸಲು ಹೆಣಗಿದರು. ಕ್ರಮೇಣ, ಚಲನ ಚಿತ್ರ ನಮ್ಮಲ್ಲಿ ದೊಡ್ಡ ಉದ್ಯಮವಾಗಿ ಬೆಳೆದುಕೊಂಡಿತು. ಮುಂಬೈ, ಕಲ್ಕತ್ತ, ಮದ್ರಾಸುಗಳು ಕೇಂದ್ರಗಳಾದವು. ಎರಡನೇ ಮಹಾಯುದ್ಧದ ಹೊತ್ತಿಗೆ ನಮ್ಮ ಚಿತ್ರೋದ್ಯಮ, ತಯಾರಿಸುವ ಚಿತ್ರಗಳ ಸಂಖ್ಯೆಯ ದೃಷ್ಟಿಯಿಂದ, ಜಗತ್ತಿನಲ್ಲೇ ಎರಡನೆಯದಾಗಿತ್ತು. (ಮೊದಲನೆಯ ಸ್ಥಾನ ಜಪಾನ್ ಪಡೆದುಕೊಂಡಿತ್ತು.) ಮುಂದೆ ಕೂಡ, ನಮ್ಮ ಚಿತ್ರೋತ್ಪಾದನೆ, ಸಂಖ್ಯೆಯ ದೃಷ್ಟಿಯಿಂದ ವಿಶ್ವದ ಒಂದು ಎರಡನೇ ಸ್ಥಾನಗಳನ್ನೇ ಆಕ್ರಮಿಸಿಕೊಳ್ಳುತ್ತ ಬಂದಿದೆ. ಚಲನಚಿತ್ರ ನಮ್ಮ ದೇಶದ ಜನಜೀವನದ ಮೇಲೆ ಮಾಡಿದ ಪರಿಣಾಮವಾದರೂ ಸಣ್ಣದಲ್ಲ. ನಮ್ಮ ಸಾಮಾಜಿಕ ಜೀವನದ ಮೇಲೆ ಸಿನೆಮಾ ಉಂಟುಮಾಡಿರುವ ಪರಿಣಾಮವನ್ನಾಗಲೀ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅದು ಪ್ರಚೋದಿಸಿದ ರಾಷ್ಟ್ರಭಕ್ತಿಯನ್ನಾಗಲೀ ಈಚಿನ ವರ್ಷಗಳಲ್ಲಿ ಅದು ತಮಿಳುನಾಡಿನ ರಾಜಕೀಯವನ್ನು ತನ್ನ ನಿಯಂತ್ರಣದಲ್ಲಿಟ್ಟು ಕೊಂಡ ಸಂಗತಿಯನ್ನಾಗಲೀ ಅಲ್ಪವೆನ್ನುವಂತಿಲ್ಲ. ನಮ್ಮ ಆಧುನಿಕ ಜನಜೀವನದಲ್ಲಿ ಮತ್ತಾವುದಕ್ಕಿಂತ ಹೆಚ್ಚಾಗಿ ಸಿನೆಮಾ ಹೊಸತನ್ನು ಹಬ್ಬಿಸುತ್ತ ಬಂದಿದೆ. ಇಷ್ಟಾ ದರೂ ನಮ್ಮ ಸಿನೆಮಾ ಒಂದು ಗಂಭೀರ ಭಾಷೆಯಾಗಿ ಬೆಳೆಯಲೇ ಇಲ್ಲ. ದೃಶ್ಯ ಮತ್ತು ಶ್ರವ್ಯಗಳು ಒಗ್ಗೂಡಿಕೊಂಡ ಸಿನೆಮಾದ ಅನನ್ಯ ಮಾಧ್ಯಮವನ್ನು ಬಳಸಿ ಕೊಂಡು ಸಮರ್ಥವಾದ ಹೊಸ ಸಮೂಹಸಂಪರ್ಕಸಾಧನವೊಂದನ್ನು ರೂಪಿಸಿ

ಕೊಳ್ಳುವ ಜಾಣ್ಮೆ ನಮಗೆ ಸಿದ್ಧಿಸಲಿಲ್ಲ. (ಪ್ರಾಯಶಃ, ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನಂತೆ ಇನ್ನೂ ನಮ್ಮಲ್ಲಿ ಔದ್ಯೋಗಿಕ ಸಂಸ್ಕೃತಿ ನಗರ ನಾಗರೀಕತೆ ಅಷ್ಟಾಗಿ ಬೆಳೆದುಕೊಳ್ಳದಿದ್ದುದರಿಂದ, ಸಿನೆಮಾ ಇಲ್ಲಿ ಹಾಗೆ ಅನಿವಾರ್ಯವಾಗಿ ಸಹಜವಾಗಿ ರೂಪುಗೊಳ್ಳಲಿಲ್ಲ.) ಸೆಲ್ಯುಲಾಯ್ಡ್ ಬಳಸಿ ನಾವು ಸೃಷ್ಟಿಸುತ್ತಿದ್ದುದು, ನಾಟಕ ನೃತ್ಯ ಸಂಗೀತ ಮುಂತಾದವುಗಳ 'ಹೋಲ್ಡ್‌ಆಲ್'ನ್ನೇ.

ವಿಶ್ವ ಚಲನಚಿತ್ರಕ್ಕೆ ಇಂಡಿಯಾ ಕೊಟ್ಟ ಮೊತ್ತಮೊದಲ ಗಣನೀಯ ಕಾಣಿಕೆ ಸತ್ಯಜಿತ್ ರಾಯ್ ಅವರ 'ಪಥೇರ್ ಪಾಂಚಾಲಿ'. ಅದು ಹೊರಬಂದದ್ದು ೧೯೫೫ ರಲ್ಲಿ. ಸಿನೆಮಾ ಮಾಧ್ಯಮದ ಮೇಲೆ ಸಂಪೂರ್ಣ ಹತೋಟಿ ಪಡೆದುಕೊಂಡು, ವಿಶ್ವ ಚಲನಚಿತ್ರ ಪರಂಪರೆಯಲ್ಲಿ ರಾಯ್ ಸೃಷ್ಟಿಸಿಕೊಟ್ಟ ಈ ಚಿತ್ರ, ೧೯೫೬ ರ ಕ್ಯಾನ್ ಚಿತ್ರೋತ್ಸವದಲ್ಲಿ ವಿಶ್ವ ಪ್ರಶಸ್ತಿ ಪಡೆದುಕೊಂಡಿತು. ಇದರಿಂದ ಈ ಚಿತ್ರ, ಮೊತ್ತಮೊದಲ ಬಾರಿಗೆ, ಇಂಡಿಯಾದ ಚಲನಚಿತ್ರದ ಕಡೆಗೆ ವಿಶ್ವದ ಗಮನವನ್ನು ಸೆಳೆಯಿತು. (೧೯೫೫ ರಲ್ಲಿ ಇಂಥದೇ ಪ್ರಶಸ್ತಿ ಗಳಿಸಿದ **ರಶೋಮೊನ್** ಚಿತ್ರ, ಆ ಮೂಲಕ, ಜಪಾನಿ ಚಿತ್ರಗಳ ಕಡೆಗೆ ವಿಶ್ವದ ಗಮನ ಸೆಳೆದಿದ್ದನ್ನು ಇದಕ್ಕೆ ಹೋಲಿಸಬಹುದು. ಆದರೆ, ಮುಖ್ಯ ವ್ಯತ್ಯಾಸವೆಂದರೆ, ಅದಕ್ಕೂ ಮೊದಲೇ ಜಪಾನ್‌ನಲ್ಲಿ ಅಸಾಧಾರಣ ಜಗತ್ ಶ್ರೇಷ್ಠ ಚಿತ್ರಕೃತಿಗಳು ತಯಾರಾಗಿದ್ದವು. ಹೊರ ಜಗತ್ತಿಗೆ ಅದು ಅಷ್ಟಾಗಿ ತಿಳಿದಿರಲಿಲ್ಲ. ಇಂಡಿಯಾದಲ್ಲಿ ಅಂಥ ಬೆಳವಣಿಗೆ ನಡೆದೇ ಇರಲಿಲ್ಲ.)

'ಪಥೇರ್ ಪಾಂಚಾಲಿ' ವಿಶ್ವ ಚಲನಚಿತ್ರದ ಮೇರುಕೃತಿಗಳಲ್ಲಿ ಒಂದೆಂದು ಈಗ ಭದ್ರ ಸ್ಥಾನ ಪಡೆದುಕೊಂಡಿದೆ.

ಸತ್ಯಜಿತ್ ರಾಯ್, ತನ್ನ ಬದುಕಿನ ಹಿನ್ನೆಲೆಯ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ:

"ನಾನು ೧೯೨೧ ರಲ್ಲಿ ಕಲ್ಕತ್ತಾದಲ್ಲಿ ಹುಟ್ಟಿದೆ. ನನ್ನ ಅಜ್ಜ ಹಿರೆ ರಾಯ್ ವಿದ್ವಾಂಸರೂ ಲೇಖಕರೂ ಸಂಗೀತಜ್ಞರೂ ಆಗಿದ್ದವರು. ಅವರು ಆ ಕಾಲಕ್ಕೆ ಅತ್ಯಾಧುನಿಕವಾದ ಒಂದು ಮುದ್ರಣಸಂಸ್ಥೆಯನ್ನು ಸ್ಥಾಪಿಸಿದ್ದರು; ಮಕ್ಕಳ ನಿಯತಕಾಲಿಕಗಳನ್ನು ಪ್ರಕಟಿಸುತ್ತಿದ್ದರು. ನನ್ನ ತಂದೆ **ಸುಕುಮಾರ ರಾಯ್** ಬಂಗಾಳದಲ್ಲಿ ಹೆಸರಾಂತ ಲೇಖಕರು, ಮುದ್ರಣಸಂಸ್ಥೆಯ ನಿರ್ದೇಶಕರಾಗಿ ಮುಂದುವರಿದಿದ್ದರು. ಅವರು ತನ್ನ ಮೂವತ್ತೊಂಭತ್ತನೆಯ ವಯಸ್ಸಿನಲ್ಲಿ ತೀರಿಕೊಂಡರು.

ಆಗ ನನಗೆ ಇನ್ನೂ ಎರಡು ವರ್ಷ. ಮುಂದೆ ಕುಟುಂಬದ ಆರ್ಥಿಕ ಅವಲಂಬನೆಗಳೆಲ್ಲ ಕಳಚಿಹೋಗಿ ನನ್ನ ತಾಯಿಯೇ ನನ್ನನ್ನು ಸಾಕಬೇಕಾಯಿತು. ಆಕೆ ಶಾಲೆಯಲ್ಲಿ ಉಪಾಧ್ಯಾಯಿನಿಯಾಗಿ ಸೇರಿಕೊಂಡು ನನ್ನನ್ನು ಬೆಳೆಸಿದಳು. ನಾನು ಸೋದರ ಮಾವನ ಮನೆಯಲ್ಲಿ ಬೆಳೆದು ಮುಂದೆ ಕಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ, ಅರ್ಥಶಾಸ್ತ್ರದಲ್ಲಿ ಡಿಗ್ರಿ ಪಡೆದುಕೊಂಡೆ (೧೯೪೦). **ನನಗೆ** ಮೊದಲಿನಿಂದಲೂ ಚಿತ್ರರಚನೆ

ಯಲ್ಲಿ ಆಸಕ್ತಿಯಿದ್ದ ಕಾರಣ ಮುಂದೆ ನಾನು ಶಾಂತಿನಿಕೇತನಕ್ಕೆ ಹೋಗಿ ಚಿತ್ರಕಲೆಯನ್ನು ಅಧ್ಯಯನ ಮಾಡಿದೆ. ನಮ್ಮ ಕುಟುಂಬದ ಬಗ್ಗೆ ವಿಶ್ವಾಸವಿಟ್ಟುಕೊಂಡಿದ್ದ **ರವೀಂದ್ರನಾಥ ಠಾಕೂರ್** ಆಗ ಬದುಕಿದ್ದರು. ಅಲ್ಲಿ ಎರಡೂವರೆ ವರ್ಷ ಕಲಿತು ಕಲ್ಕತ್ತಾಕ್ಕೆ ಮರಳಿ, ಮತ್ತೆ ಕೆಲವು ಕಾಲ ಚಿತ್ರಕಲೆಯಲ್ಲಿ ತರಬೇತಿ ಪಡೆದುಕೊಂಡು ಅನಂತರ, ಜೀವನ ನಿರ್ವಹಣೆಗಾಗಿ ಜಾಹಿರಾತು ಸಂಸ್ಥೆಯೊಂದರಲ್ಲಿ (ಇಂಗ್ಲೀಷ್ ಸಂಸ್ಥೆ) ಚಿತ್ರಕಾರನಾಗಿ ಸೇರಿಕೊಂಡೆ. ಹತ್ತು ವರ್ಷ ದುಡಿದ ಮೇಲೆ ಅಲ್ಲಿನ 'ಕಲಾ ನಿರ್ದೇಶಕ'ನಾದೆ.

ಬಾಲ್ಯದಿಂದಲೂ ಸಿನೆಮಾ ನನ್ನನ್ನು ಆಕರ್ಷಿಸಿತ್ತು. ಮುಂದೆ ಅದು ನನ್ನ 'ಹವ್ಯಾಸ'ವಾಯಿತು. ೧೯೪೭ ರಲ್ಲಿ ನಾನೊಬ್ಬ ಸಂಸ್ಥಾಪಕ ಸದಸ್ಯನಾಗಿ, **ಕಲ್ಕತ್ತಾ ಫಿಲ್ಮ್ ಸೊಸೈಟಿ** ಪ್ರಾರಂಭಿಸಿದೆವು. ಅಲ್ಲಿ, ಹಲವಾರು ಉತ್ತಮ ಚಿತ್ರಗಳನ್ನು ಅನೇಕ ಸಲ ನೋಡಿದೆ. **ಪೊಟೆಮ್‌ಕಿನ್** ಚಿತ್ರವನ್ನು 'ಕೆಲವು ಡಜನ್' ಬಾರಿ ನೋಡಿದೆ. ಇದೇ ಸಮಯದಲ್ಲಿ ಚಲನಚಿತ್ರವನ್ನು ಕುರಿತ ಅನೇಕ ಮೌಲಿಕ ಗ್ರಂಥಗಳನ್ನು ಓದಿಕೊಂಡೆ. ಮುಂದೆ ನನಗೆ ಪ್ರಸಿದ್ಧ ಸೋವಿಯತ್ ನಿರ್ದೇಶಕ **ಪುಡೊವ್‌ಕಿನ್**‌ನ ಜೊತೆ ಸಂಪರ್ಕ ಪಡೆದುಕೊಳ್ಳಲು ಸಾಧ್ಯವಾಯಿತು. ೧೯೪೯ ರಲ್ಲಿ ಪ್ರಸಿದ್ಧ ಫ್ರೆಂಚ್ ನಿರ್ದೇಶಕ **ಜೀನ್ ರೆನ್ನೊಯ್ರ್** ತಮ್ಮ **ರಿವರ್** ಚಿತ್ರೀಕರಣಕ್ಕೆ ಕಲ್ಕತ್ತಾಕ್ಕೆ ಬಂದಿದ್ದಾಗ, ನನಗೆ ಅವರ ಸಂಪರ್ಕಲಾಭವಾಯಿತು. ಅವರಲ್ಲಿ 'ಪಥೇರ್ ಪಾಂಚಾಲಿ' ಚಿತ್ರ ಮಾಡುವ ನನ್ನ ಕನಸನ್ನು ಹೇಳಿಕೊಂಡಾಗ ಅವರು ನನ್ನನ್ನು ಪ್ರೋತ್ಸಾಹಿಸಿದರು. ೧೯೫೦ ರಲ್ಲಿ ನನ್ನ ಸಂಸ್ಥೆ ನನ್ನನ್ನು ಕೆಲಸದಮೇಲೆ ಲಂಡನ್ನಿಗೆ ಕಳಿಸಿತು. ಅಲ್ಲಿ ನಾನು ವಿಶ್ವಚಲನಚಿತ್ರದ ಮೇರುಕೃತಿಗಳನ್ನು ವಿವರವಾಗಿ ನೋಡುವ ಅವಕಾಶ ಸಿಕ್ಕಿತು.

ಅದೇ ವರ್ಷ ಕಲ್ಕತ್ತಾಕ್ಕೆ ಮರಳಿದೊಡನೆ 'ಪಥೇರ್ ಪಾಂಚಾಲಿ'ಯ ಚಿತ್ರಲೇಖನ ಸಿದ್ಧಪಡಿಸಿದೆ. ಈ ಚಿತ್ರಲೇಖನದಲ್ಲಿ, ಆಯಾ ಸನ್ನಿವೇಶಗಳ ಐದುನೂರು ಚಿತ್ರಗಳನ್ನು ಬರೆದುಕೊಂಡಿದ್ದೆ. ಚಿತ್ರಕ್ಕೆ ನಿರ್ಮಾಪಕರು ಸಿಗಬಹುದೇ ಎಂದು ಹುಡುಕಾಡಿ ನಿರಾಶನಾದೆ. ಕಡೆಗೆ, ಹೇಗೇ ಆಗಲಿ, ನಾವೇ ಮೂವರು ಮಿತ್ರರು (ಆಗಿನ್ನೂ ಸ್ತಬ್ಧಛಾಯಾಗ್ರಾಹಕರಾಗಿದ್ದ **ಸುಬ್ರತೊ ಮಿತ್ರ** ಮತ್ತು ಕಲಾ ನಿರ್ದೇಶಕ **ಬನ್ಸಿ ಚಂದ್ರಗುಪ್ತ**) ಕೂಡಿ ಚಿತ್ರ ತಯಾರಿಸಲು ನಿರ್ಧರಿಸಿದೆವು."

ಅನೇಕಾನೇಕ ಕಷ್ಟಕೋಟಲೆಗಳನ್ನು ದಾಟಿ, ಮಧ್ಯೆ ಒಂದು ವರ್ಷ ಕೆಲಸ ಪೂರ್ತಾ ನಿಂತುಹೋಗಿ. ಕಡೆಗೊಮ್ಮೆ 'ಪಥೇರ್ ಪಾಂಚಾಲಿ' ಚಿತ್ರ ಹೊರಬಂದದ್ದು ೧೯೫೫ ರಲ್ಲಿ. ಮರುವರ್ಷವೇ (೧೯೫೬) ಅವರು, ಚಿತ್ರದ ಎರಡನೇ ಭಾಗವಾದ 'ಅಪರಾಜಿತೊ'ವನ್ನು ತಯಾರಿಸಿದರು. ಮೂರನೆಯ ಭಾಗವಾದ 'ಅಪೂರ್ ಸಂಸಾರ್' ನಿರ್ಮಾಣವಾದದ್ದು ೧೯೫೯ ರಲ್ಲಿ. ಅದಕ್ಕೆ ಮೊದಲು (೧೯೫೭ ಮತ್ತು

೧೯೫೮ ರಲ್ಲಿ) ಅವರು, ಶೈಲಿಯ ವೈವಿಧ್ಯ ಸಾಧಿಸಿಕೊಳ್ಳುವ ಹಂಬಲದಿಂದ, ತುಂಬ ಭಿನ್ನವಾದ ಎರಡು ವಸ್ತುಗಳನಾಧರಿಸಿ ಅತ್ಯಂತ ಭಿನ್ನವಾದ ಶೈಲಿಗಳಲ್ಲಿ, **ಪರಾಶ್ ಪತ್ಥರ್** ಮತ್ತು **ಜಲಸಾ ಘರ್** ಎಂಬ ಎರಡು ಚಿತ್ರಗಳನ್ನು ನಿರ್ಮಿಸಿದರು.

ಮೊದಲ ೩-೪ ಚಿತ್ರಗಳನ್ನು ನಿರ್ಮಿಸುವ ತನಕವೂ 'ಹವ್ಯಾಸಿ ಚಿತ್ರನಿರ್ಮಾಪಕ'ನಾಗಿಯೇ ಉಳಿದುಕೊಂಡಿದ್ದ ರಾಯ್, ಅನಂತರ, ತಮ್ಮ ಚಿತ್ರಕಾರ ವೃತ್ತಿಗೆ ರಾಜೀನಾಮೆ ಕೊಟ್ಟು ಪೂರ್ಣಾವಧಿಯ ಚಿತ್ರನಿರ್ಮಾಪಕನಾಗಿ ಉದ್ದಕ್ಕೂ ಚಿತ್ರನಿರ್ಮಾಣ ಮಾಡುತ್ತ ಬಂದಿದ್ದಾರೆ. 'ಪಥೇರ್ ಪಾಂಚಾಲಿ'ಯಿಂದ ಮೊದಲಾಗಿ ಉದ್ದಕ್ಕೂ, ಅವರ ಚಿತ್ರಗಳಿಗೆ ವಿಶ್ವದ ಎಲ್ಲ ಭಾಗಗಳಲ್ಲಿ ಉನ್ನತ ಪ್ರಶಸ್ತಿಗಳು ದೊರೆಯುತ್ತ ಬಂದಿವೆ ಈಗ ಅವರು ನಿಸ್ಸಂದಿಗ್ಧವಾಗಿ ಜಗತ್ತಿನ ಶ್ರೇಷ್ಠ ನಿರ್ಮಾಪಕರ ಮೊದಲ ಸಾಲಿನಲ್ಲಿ ಪರಿಗಣಿತವಾಗಿ ನಿಂತಿದ್ದಾರೆ.

ರಾಯ್ ಅವರ ಈ ತನಕದ ಚಿತ್ರಗಳು ಇವು :

೧. ಪಥೇರ್ ಪಾಂಚಾಲಿ (೧೯೫೫) ೨. **ಅಪರಾಜಿತೊ** (೧೯೫೬) ೩. **ಪರಾಶ್ ಪತ್ಥರ್** (೧೯೫೭) ೪. **ಜಲಸಾ ಘರ್** (೧೯೫೮) ೫. ಅಪೂರ್ ಸಂಸಾರ್ (೧೯೫೯) ೬ ದೇವಿ (೧೯೬೦) ೭. **ರವೀಂದ್ರನಾಥ ಠಾಕೂರ್** (ಜೀವನ ಚರಿತ್ರೆ ಚಿತ್ರ-೧೯೬೧) ೮. **ತೀನ್ ಕನ್ಯಾ** (೧೯೬೧) ೯. **ಕಾಂಚನಜಂಗಾ** (ಮೊದಲ ವರ್ಣಚಿತ್ರ-೧೯೬೨) ೧೦. **ಅಭಿಜನ್** (೧೯೬೨) ೧೧. **ಮಹಾನಗರ್** (೧೯೬೩) ೧೨. **ಚಾರುಲತಾ** (೧೯೬೪) ೧೩. **ಕಾಪುರುಷ್ ಓ ಮಾಪುರುಷ್** (೧೯೬೫) ೧೪. **ನಾಯಕ್** (೧೯೬೬) ೧೫. **ಚಿರಿಯಾ ಖಾನಾ** (೧೯೬೭) ೧೬. **ಗೋಪಿ ಗಾಯೆಂ ಬಾಘಾ ಬೈನೆ** (೧೯೬೯) ೧೭. **ಅರಣ್ಯೇರ್ ದಿನರಾತ್ರಿ** (೧೯೭೦) ೧೮. **ಪ್ರತಿದ್ವಂದಿ** (೧೯೭೦) ೧೯. **ಸೀಮಾಬದ್ಧ** (೧೯೭೧) ೨೦. **ಸಿಕ್ಕಿಮ್** (ಡಾಕುಮೆಂಟರಿ-ವರ್ಣ-೧೯೭೧) ೨೧. **ಅಶನಿ ಸಂಕೇತ್** (ವರ್ಣ-೧೯೭೩) ೨೨. **ದ ಇನ್ನರ್ ಅಯ್** (ಡಾಕುಮೆಂಟರಿ-ವರ್ಣ-೧೯೭೪) ೨೩. **ಸೋನಾರ್ ಕೆಲ್ಲಾ** (ವರ್ಣ-೧೯೭೪) ೨೪. **ಜನ ಅರಣ್ಯ** (೧೯೭೫) ೨೫. **ಬಾಲ** (ಡಾಕುಮೆಂಟರಿ-ವರ್ಣ-೧೯೭೬) ೨೬. **ಶತರಂಜ್ ಕೆ ಖಿಲಾರಿ** (ವರ್ಣ-ಹಿಂದಿ-೧೯೭೭) ೨೭. **ಜೈ ಬಾಬಾ ಫೆಲುನಾಥ್** (ವರ್ಣ-೧೯೭೯) ೨೮. **ಹೀರಕ್ ರಾಜಾರ್ ದೇಶೇ** (ವರ್ಣ-೧೯೮೦)

ಇವುಗಳಲ್ಲಿ, ಹಿಂದಿಯಲ್ಲಿ ತಯಾರಾದ 'ಶತರಂಜ್ ಕೆ ಖಿಲಾರಿ'ಯೊಂದನ್ನು ಬಿಟ್ಟರೆ ಉಳಿದುವೆಲ್ಲ ಬಂಗಾಳಿ ಭಾಷೆಯವೇ. ಈ ಚಿತ್ರಗಳೆಲ್ಲವೂ ವಸ್ತುವಿನಲ್ಲಿ ಶೈಲಿಯಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿವೆ. ರಾಯ್ ಕೃತಿಗಳಲ್ಲಿ ಕಾಣುವ ಅಪಾರ ವೈವಿಧ್ಯ ಬೆರಗುಗೊಳಿಸುವಂಥದು.

ಬಂಗಾಳದ ನವೋದಯ ಸಾಹಿತ್ಯ ಕಾಲದಲ್ಲಿ ಪ್ರಸಿದ್ಧರಾದ **ಬಿಭೂತಿಭೂಷಣ**

ಬ್ಯಾನರ್ಜಿ ಅವರು, ೧೯೩೦ ರ ದಶಕದಲ್ಲಿ ರಚಿಸಿದ ಪ್ರಖ್ಯಾತ ಕಾದಂಬರಿ 'ಪಥೇರ್ ಪಾಂಚಾಲಿ'. ಆ ಕಾದಂಬರಿಯ ಎರಡನೆಯ ಭಾಗ 'ಅಪರಾಜಿತೊ'. ತುಂಬ ಪ್ರಬುದ್ಧ ಬರವಣಿಗೆಗಳಾಗಿದ್ದ ಈ ಕಾದಂಬರಿಗಳು ಅತ್ಯಂತ ಜನಪ್ರಿಯವೂ ಆಗಿ, ಮತ್ತೆ ಮತ್ತೆ ಪ್ರಕಟವಾಗುತ್ತಿದ್ದವು, ಅವುಗಳ ಮುದ್ರಣವೊಂದಕ್ಕೆ ಸತ್ಯಜಿತ್ ರಾಯ್ ಚಿತ್ರಗಳನ್ನು ಬರೆದುಕೊಟ್ಟಿದ್ದರು. ಆಗಲೇ ಅವರಿಗೆ ಈ ಕೃತಿಗಳನ್ನು ಚಲನ ಚಿತ್ರದಲ್ಲಿ ರೂಪಿಸುವ ಬಯಕೆ ಮೂಡಿದ್ದು.

'ಪಥೇರ್ ಪಾಂಚಾಲಿ' ಚಿತ್ರ, ಕಾದಂಬರಿಯ ಹಲವಾರು ವಿವರಗಳನ್ನು ಬಿಟ್ಟು ಸಂಕ್ಷೇಪವಾಗಿದ್ದರೂ ಒಟ್ಟಿನಲ್ಲಿ, ಅತ್ಯಂತ ನಿಷ್ಠೆಯಿಂದ ಕಾದಂಬರಿಯನ್ನೇ ಅನುಸರಿಸುತ್ತದೆ. 'ಅಪರಾಜಿತೊ'ದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. 'ಅಪೂರ್ ಸಂಸಾರ್'ನ ವಸ್ತು, ಕಾದಂಬರಿಯಲ್ಲಿ ಸಿಗುವ ಸೂಚನೆಗಳನ್ನಾಧರಿಸಿ ರಾಯ್ ಅವರೇ ಕಲ್ಪಿಸಿದ್ದು. ಈ ಮೂರೂ ಚಿತ್ರಗಳು ಬಿಡಿಬಿಡಿಯಾಗಿ ಸ್ವತಂತ್ರ ಕೃತಿಗಳೆನ್ನುವಂತಿವೆ; ಹಾಗೇ, ಮೂರೂ ಒಟ್ಟುಗೂಡಿ ಕೂಡ ಅಖಂಡ ಕಥಾಪ್ರವಾಹವಾಗುತ್ತದೆ.

'ಪಥೇರ್ ಪಾಂಚಾಲಿ'ಯ ಕಥಾವಸ್ತು ಇದು :

ಕಾಲ—ಸುಮಾರು ೧೯೨೦. ಸ್ಥಳ—ಬಂಗಾಲದ ಮೂಲೆಯ ಒಂದು ಚಿಕ್ಕ ಹಳ್ಳಿ. ಅಲ್ಲಿ ವಾಸಮಾಡುವ ಹರಿಹರ ರಾಯ್ ಪೌರೋಹಿತ್ಯದಿಂದ ಬದುಕು ಸಾಗಿಸುವ ಬಡಬ್ರಾಹ್ಮಣ. ಹೊಸ ರೀತಿಯ ಜಾತ್ರಾ ನಾಟಕಗಳನ್ನು ಬರೆಯುವ ಹವ್ಯಾಸವಿರುವ ಈತ ಕವಿಯೂ ಹೌದು. ಆದರೆ, ಆತನ ವ್ಯಕ್ತಿತ್ವದ ಈ ಮುಖದ ಬಗ್ಗೆ ಯಾರೊಬ್ಬರೂ ಆಸಕ್ತಿ ತೋರಿದ್ದಿಲ್ಲ. ಕನಸು ಕಾಣುವುದರಲ್ಲೆ ಸಂತುಷ್ಟನಾದ ಆತ ತನ್ನ ಬಡತನದ ಬಗ್ಗೆ ಕೂಡಾ ಅಷ್ಟಾಗಿ ಯೋಚಿಸುವುದಿಲ್ಲ. ಸರ್ವಜಯಾ ಆತನ ಪತ್ನಿ ; ಹೇಗಾದರೂ ನಾಲ್ಕು ಜನರ ಕಣ್ಣಿನಲ್ಲಿ ಮರ್ಯಾದೆಯಿಂದ ಸಂಸಾರ ತೂಗಿಸಿಕೊಂಡುಹೋಗಬೇಕೆಂಬ ಹಟದವಳು. ಅವರ ಪುಟ್ಟ ಮಗಳು ದುರ್ಗಾ. ಒಮ್ಮೆ ಇವರದೇ ಆಗಿದ್ದು, ಈಗ ಮೋಸದಿಂದ ದಾಯಾದಿ ಶ್ರೀಮಂತ ಕುಟುಂಬಕ್ಕೆ ಸೇರಿರುವ ತೋಟದಲ್ಲಿ ಹೋಗಿ ಹಣ್ಣು ಕದಿಯುವುದು ಆಕೆಯ ಚಟ. ಈ ಮನೆಯಲ್ಲೇ ದಾಯಾದಿ ಸಂಬಂಧದ ಹಣ್ಣುಹಣ್ಣು ಮುದುಕಿಯೊಬ್ಬಳು ವಾಸಿಸುತ್ತಿದ್ದು ಆಕೆ, ದುರ್ಗಾಳ ಈ ಹುಡುಗುಬುದ್ಧಿಗೆ ಪ್ರಚೋದನೆ ಕೊಡುತ್ತಾಳೆ. ದುರ್ಗಾಳಿಗೆ ಆ ಮುದುಕಿಯೆಂದರೆ ಪ್ರಾಣ. ಸರ್ವಜಯಾ ಮಾತ್ರ ಆ ಮುದುಕಿಯ ಕಿರಿಕಿರಿ ತಡೆಯಲಾಗದೆ ಅವಳೊಡನೆ ಜಗಳಾಡುತ್ತಾಳೆ. ಮುದುಕಿ ಮನೆ ಬಿಟ್ಟು ಹೋಗುತ್ತಾಳೆ. ಅಷ್ಟರಲ್ಲಿ ಸರ್ವಜಯಾಳಿಗೆ ಒಬ್ಬ ಮಗ ಹುಟ್ಟುತ್ತಾನೆ ಅವನಿಗೆ ಅಪೂರ್ವಕುಮಾರ ರಾಯ್ (ಅಪೂ) ಎಂದು ಹೆಸರಿಡುತ್ತಾರೆ. ಅವನು ಹುಟ್ಟಿದಮೇಲೆ ಮುದುಕಿ ಮತ್ತೆ ಮನೆಗೆ ಬಂದು ಸೇರಿಕೊಳ್ಳುತ್ತಾಳೆ. ಅಪೂ ಚುರುಕು ಹುಡುಗನಾಗಿ ಬೆಳೆಯುತ್ತಾನೆ. ಊರಲ್ಲಿ ಚಿಕ್ಕ ಅಂಗಡಿಯಿಟ್ಟುಕೊಂಡು ವ್ಯಾಪಾರಮಾಡುತ್ತ, ಅದರ ಜೊತೆಜೊತೆಯಲ್ಲೇ ಮಕ್ಕಳಿಗೆ

ಬರಿಸುವ ಹಳ್ಳಿಯ ಉಪಾಧ್ಯಾಯನೊಬ್ಬನಲ್ಲಿ ಆತ ಕಲಿಯುತ್ತಾನೆ. ದುರ್ಗಾ ಅವನಿಗೆ ಆಟದ ಸಂಗಾತಿ. ಆಕೆ ತನ್ನ ಕದಿಯುವ ಚಟ ಬಿಡಲಾರಳು. ದಾಯಾದಿ ಶ್ರೀಮಂತರ ಮನೆಯಲ್ಲಿ ಒಂದು ಸರ ಕದ್ದಳೆಂದು ಅಪಾದನೆ ಬಂದಾಗ ತಾಯಿ ಆಕೆಯನ್ನು ಚೆನ್ನಾಗಿ ಹೊಡೆಯುತ್ತಾಳೆ. ಊರಿನ ಆಚೆ ಗದ್ದೆಗಳನ್ನು ದಾಟಿ ದೂರ ಹೋದರೆ ಅಲ್ಲಿ ಒಂದು ರೈಲುಮಾರ್ಗ. ಒಮ್ಮೆ ಅಪೂ ಮತ್ತು ದುರ್ಗಾ, ಅಲ್ಲಿ ಹೋಗಿ ಮೊದಲ ಸಲ ರೈಲನ್ನು ನೋಡಿ ನಿಬ್ಬೆರಗಾಗುತ್ತಾರೆ. ರೈಲು ನೋಡಿ ಮನೆಗೆ ಮರಳುವಾಗ, ಮತ್ತೆ ಮನೆಯಲ್ಲಿ ಜಗಳಮಾಡಿಕೊಂಡು ಮನೆಬಿಟ್ಟು ಹೊರಟ ಮುದುಕಿ, ಹಾದಿಯಲ್ಲೇ ಸತ್ತು ಬಿದ್ದದ್ದನ್ನು ಕಾಣುತ್ತಾರೆ.

ಬೆಳೆಯುವ ಮಕ್ಕಳ ಜೊತೆ ಬಡತನವೂ ಬೆಳೆಯುತ್ತ ಸಂಸಾರದ ಸ್ಥಿತಿ ದಿನ ದಿನಕ್ಕೆ ಹದಗೆಡುತ್ತಿರುವಾಗ, ಹರಿಹರನಿಗೆ ಒಮ್ಮೆ ಬೇರೆ ಊರಿನಿಂದ ಪೌರೋಹಿತ್ಯಕ್ಕೆ ಕರೆ ಬರುತ್ತದೆ. ಹಣ ಸಿಕ್ಕೀತೆಂಬ ಆಸೆಯಿಂದ ಆತ ಹೊರಡುತ್ತಾನೆ.

ಹರಿಹರ ಹೋಗಿ ಬಹಳ ದಿನಗಳಾದರೂ ಆತನಿಂದ ಸಮಾಚಾರವೇ ಇಲ್ಲ. ಕೊನೆಗೊಂದು ಕಾಗದ ಬರುತ್ತದೆ –ತಾನು ಹೋದ ಊರಿನಲ್ಲಿ ಆಶೌಚದಿಂದ ಪೂಜೆ ನಿಂತುಹೋಗಿರುವುದಾಗಿ. ಕೆಲವು ದಿನ ಬಿಟ್ಟು ಬಂದ ಮತ್ತೊಂದು ಕಾಗದ ಕೊಂಚ ಆಸೆ ಹುಟ್ಟಿಸುತ್ತದೆ ; ಆತ ಸ್ವಲ್ಪ ಹಣ ಪಡೆದುಕೊಂಡು ಸದ್ಯದಲ್ಲೇ ಊರಿಗೆ ಮರಳಲಿರುವ ಸುದ್ದಿ ಮುಟ್ಟಿಸುತ್ತದೆ.

ಸರ್ವಜಯಾ ಬಡತನದ ಬವಣೆಯಲ್ಲಿ ದಿಕ್ಕುಗಾಣದೆ ಹೇಗೋ ಕಾಲ ನೂಕುತ್ತಿದ್ದಾಳೆ. ಅಷ್ಟರಲ್ಲಿ ಮಳೆಗಾಲ ಪ್ರಾರಂಭವಾಗುತ್ತದೆ. ಆಡಲು ಹೋದ ದುರ್ಗಾ ಮಳೆಯಲ್ಲಿ ತೊಯ್ದು ಜ್ವರಕ್ಕೆ ತುತ್ತಾಗಿ ಸಾಯುತ್ತಾಳೆ. ಜೀರ್ಣವಾದ ವಾಸದ ಮನೆ ಮುರಿದುಬೀಳುತ್ತದೆ. ಈ ಸಮಯಕ್ಕೆ ಊರಿಗೆ ಹಿಂದಿರುಗಿದ ಹರಿಹರ, ಕಡೆಗೂ ಮ್ಮೆ ವಾಸ್ತವಕ್ಕೆ ಕಣ್ಣು ತೆರೆಯುತ್ತಾನೆ. ಹೆಂಡತಿಯ ಸೂಚನೆಯನ್ನೊಪ್ಪಿ ಊರು ಬಿಟ್ಟು ವಾರಣಾಸಿಗೆ ಹೋಗಲು ನಿರ್ಧರಿಸುತ್ತಾನೆ. ಈ ಪೂರ್ವಜರ ನೆಲೆಯನ್ನು ಬಿಟ್ಟುಕೊಟ್ಟು, ಕುಟುಂಬ ವಾರಣಾಸಿಯ ಕಡೆ ಹೊರಡುತ್ತದೆ.

ಈ ಕಥೆ 'ಅಪರಾಜಿತೊ'ನಲ್ಲಿ ಮುಂದುವರಿಯುತ್ತದೆ:

ಕುಟುಂಬ ಈಗ ವಾರಣಾಸಿಗೆ ಬಂದು ನೆಲೆಸಿದೆ. ಹರಿಹರ ಪುರಾಣ ಓದಿ ಹಣಗಳಿಸಿ ಸಂಸಾರ ತೂಗಿಸುತ್ತಿದ್ದಾನೆ. ಕೊಂಚ ನೆಮ್ಮದಿ ಕಾಣುವಷ್ಟರಲ್ಲಿ, ದೀಪಾವಳಿಯ ಹಬ್ಬದ ಸಮಯಕ್ಕೆ ಹರಿಹರ ಇದ್ದಕ್ಕಿದ್ದಂತೆ ಮೃತನಾಗುತ್ತಾನೆ. ಅಕ್ಕಪಕ್ಕದ ಕೆಟ್ಟ ಕಣ್ಣುಗಳಿಂದ ತನ್ನನ್ನು ಹೇಗೋ ರಕ್ಷಿಸಿಕೊಂಡು ಸರ್ವಜಯಾ, ಜಮೀನ್ದಾರನೊಬ್ಬನ ಮನೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಅಲ್ಲಿ, ಒಮ್ಮೆ ಅಪೂ ಜಮೀನ್ದಾರನ ಊಳಿಗ ಮಾಡುತ್ತಿರುವುದನ್ನು ಕಂಡು ಆಕೆಯ ಸ್ವಾಭಿಮಾನ ಕೆರಳುತ್ತದೆ. ಭವಿಷ್ಯದ ಶೂನ್ಯ ಕಣ್ಣುಕಟ್ಟುತ್ತದೆ. ಅಷ್ಟರಲ್ಲಿ. ಬರಗಾಲದ ಒಂದು ಹಳ್ಳಿ

ಯಲ್ಲಿ ನೆಲೆಸಿದ ಅಪೂನ ಚಿಕ್ಕಪ್ಪನೊಬ್ಬ ಕಾಶಿಗೆ ಬಂದಿದ್ದು, ಆತನ ಸೂಚನೆಯ ಮೇರೆ, ಸರ್ವಜಯಾ ಅಪೂನ ಜೊತೆ ಆತನ ಹಳ್ಳಿಗೆ ಹೋಗಿ ನೆಲೆಸುತ್ತಾಳೆ. ಪೌರೋಹಿತ್ಯವನ್ನೇ ಅಧರಿಸಿದ್ದ ಆ ಚಿಕ್ಕಪ್ಪ ಅಪೂನನ್ನು ಪೌರೋಹಿತ್ಯದ ಕಸುಬಿಗಾಗಿ ತರಬೇತುಗೊಳಿಸುತ್ತಾನೆ. ಆದರೆ, ಅಪೂಗೆ ಶಾಲೆಗೆ ಹೋಗಿ ಕಲಿಯಬೇಕೆಂಬ ಆಸೆ. ಆತ ತಾಯಿಯನ್ನು ಒತ್ತಾಯಿಸಿ ಶಾಲೆಗೆ ಸೇರಿಕೊಳ್ಳುತ್ತಾನೆ. ಶಾಲೆಯಲ್ಲಿ ಚೆನ್ನಾಗಿ ಕಲಿತು ಉತ್ತೀರ್ಣನಾಗುತ್ತಾನೆ. ಮುಂದೆ, ಮತ್ತೆ ತಾಯಿಯನ್ನು ಒತ್ತಾಯಿಸಿ, ಕಲ್ಕತ್ತಾಕ್ಕೆ ಹೋಗಿ ಕಾಲೇಜಿಗೆ ಸೇರಿಕೊಳ್ಳುತ್ತಾನೆ. ರಜೆಗೆ ಆತ ಮನೆಗೆ ಬಂದಾಗ, ತಾಯಿ-ಮಗನ ನಡುವಣ ಸಂಬಂಧ ಸಡಿಲಗೊಳ್ಳುತ್ತಿರುವುದು ಕಾಣುತ್ತದೆ. ಈಗ, ಈ ಇಬ್ಬರ ಪ್ರಪಂಚ ಬೇರೆ ಬೇರೆಯೇ ಆಗಿಬಿಟ್ಟಿದೆ. ಮಗನ ಏಳಿಗೆಯನ್ನು ಗಮನಕ್ಕೆ ತಂದುಕೊಂಡು ತಾಯಿ ಅದನ್ನು ಸಹಿಸಿಕೊಳ್ಳುತ್ತಾಳೆ. ಅಪೂ ಮತ್ತೆ ಕಲ್ಕತ್ತಾಕ್ಕೆ ಮರಳಿ ತನ್ನ ಪರೀಕ್ಷೆಗಾಗಿ ಸಿದ್ಧಗೊಳ್ಳುತ್ತಿರುವಾಗ, ಊರಲ್ಲಿ ಸರ್ವಜಯಾ ಆರೋಗ್ಯ ಕೆಟ್ಟು ಹಾಸಿಗೆ ಹಿಡಿಯುತ್ತಾಳೆ. ಆದರೂ ಮಗನ ಓದಿಗೆ ತೊಂದರೆಯಾಗಬಾರದೆಂದು ಆತನಿಗೆ ವಿಷಯ ತಿಳಿಸುವುದಿಲ್ಲ. ಆತ ಪರೀಕ್ಷೆ ಮುಗಿಸಿ ಊರಿಗೆ ಮರಳುವ ಹೊತ್ತಿಗೆ ಸರ್ವಜಯಾ ಮೃತಳಾಗಿದ್ದಾಳೆ. ಚಿಕ್ಕಪ್ಪ ಎಷ್ಟು ಹೇಳಿದರೂ ಕೇಳದೆ, ಅಪೂ ಊರು ಬಿಟ್ಟು ಮತ್ತೆ ಕಲ್ಕತ್ತೆಗೆ ವಾಪಸಾಗುತ್ತಾನೆ.

ಇದರ ಮುಂದಿನ ಕಥೆ 'ಅಪೂರ್ ಸಂಸಾರ್'ನಲ್ಲಿ ಬರುತ್ತದೆ :

ಅಪೂ ಈಗ ಅಪೂರ್ವಕುಮಾರ ರಾಯ್ ಆಗಿದ್ದಾನೆ. ಓದು ಮುಗಿಸಿ ಉದ್ಯೋಗಕ್ಕಾಗಿ ಅಲೆಯುತ್ತಿರುವ ಈ ಬಿಸಿ ತರುಣ ಕಲ್ಕತ್ತಾದಲ್ಲಿ ವಾಸಿಸುತ್ತ, ಉದಯೋನ್ಮುಖ ಲೇಖಕನಾಗಿ ರೂಪುಗೊಳ್ಳುತ್ತಿದ್ದಾನೆ. ಈಗಷ್ಟೇ ಅವನ ಕಾದಂಬರಿಯೊಂದು ಪ್ರಕಟವಾಗಿದೆ. ಒಮ್ಮೆ, ಸ್ನೇಹಿತನೊಬ್ಬನ ತಂಗಿಯ ಮದುವೆಗೆಂದು ಆತನ ಜೊತೆ ಅವನ ಊರಿಗೆ ಹೋಗಿದ್ದಾಗ, ನಿಶ್ಚಿತನಾದ ವರ ಮಲರೋಗ ಬರುವ ಅರೆಹುಚ್ಚನೆಂಬುದು ಗೊತ್ತಾಗಿ, ಕಡೇ ಗಳಿಗೆಯಲ್ಲಿ ಮದುವೆ ಮುರಿದುಬೀಳುತ್ತದೆ. ಆ ಗೊಂದಲದಲ್ಲಿ, ಸ್ನೇಹಿತನ ಮನೆಯವರ ಒತ್ತಾಯಕ್ಕೆ ಸಿಲುಕಿ ಈತನೇ ಆ ಹುಡುಗಿಯನ್ನು ಮದುವೆಯಾಗುತ್ತಾನೆ. ಆದಾದಮೇಲೆ, ಕಲ್ಕತ್ತಾದ ರೈಲುನಿಲ್ದಾಣಕ್ಕೆ ತಾಗಿರುವ ಹಳೇ ಕಾಲದ ಮಹಡಿಮನೆಯೊಂದರ ಒಂಟಿ ಕೊಠಡಿಯಲ್ಲಿ ಅಪೂ-ಅಪರ್ಣಾರ ಹೊಸ ಸಂಸಾರ ಪ್ರಾರಂಭವಾಗುತ್ತದೆ. ಅಪರ್ಣಾ ಕಲ್ಕತ್ತೆಯ ಹೊಸ ನಾಗರೀಕತೆಯ ಬೆರಗಿನಲ್ಲಿ ದಿಜ್ಮೂಢಳಾಗಿದ್ದಾಳೆ. ಈಕೆ ಅದಕ್ಕಿನ್ನೂ ಒಗ್ಗಿಸಿಕೊಳ್ಳುವ ಮೊದಲೇ ಅಪರ್ಣಾ ಗರ್ಭವತಿಯಾಗಿ ತೌರಿಗೆ ಹೋಗುತ್ತಾಳೆ. ಕಲ್ಕತ್ತಾದಲ್ಲಿ ಮತ್ತೆ ಒಂಟಿಯಾಗಿ ಕಾಯುವ ಅಪೂಗೆ, ಕಡೆಯಲ್ಲಿ ತೌರಿಸಿಂದ ಬರುವ ಸುದ್ದಿ -ಅಪರ್ಣಾ ಗಂಡು ಮಗುವೊಂದಕ್ಕೆ ಜನ್ಮವಿತ್ತು ಸತ್ತಳೆಂಬುದು. ಅಪೂ ವಿಹ್ವಲನಾಗುತ್ತಾನೆ. ತಾನು ಬರೆದ ಕಾದಂಬರಿಯ ಹಾಳೆಗಳನ್ನು ಹರಿದು ಹಂದು ಗಾಳಿಗೆ ಚೆಲ್ಲುತ್ತಾನೆ. ಹೀಗೇ

ವರ್ಷಗಳು ಕಳೆಯುತ್ತವೆ. ಕ್ರಮೇಣ ಆತನ ಉನ್ಮತ್ತ ವ್ಯಗ್ರತೆ ಕಳೆದು ವಿಷಾದ ಕವಿದುಕೊಳ್ಳುತ್ತದೆ. ಈಗ ಅಪ್ಪೂ ಅಪರ್ಣಾಳ ಊರಿಗೆ ಹೋಗುತ್ತಾನೆ. ಅಲ್ಲಿ, ಈತನ ಚಿಕ್ಕಮಗ ಹಕ್ಕಿಗಳನ್ನು ಬೇಟೆಯಾಡುವ ಹಿಂಸೆಯಲ್ಲಿ ಖುಷಿಪಡುವುದನ್ನು ಕಾಣುತ್ತಾನೆ ಮಗುವನ್ನು ಒಲಿಸಿಕೊಳ್ಳುವ ಈತನ ಪ್ರಯತ್ನಗಳೆಲ್ಲ ಸೋಲುತ್ತವೆ. ಸಂಪೂರ್ಣ ನಿರಾಶನಾಗಿ ಅಲ್ಲಿಂದ ವಾಪಸು ಹೊರಟಾಗ, ತುದಿಯಲ್ಲಿ ಆ ಮಗು ಮೆಲ್ಲಗೆ ತನ್ನ ಕಡೆ ಬರತೊಡಗಿದ್ದನ್ನು ಕಂಡು, ಹರ್ಷಪರವಶನಾಗಿ ಮಗುವನ್ನೆತ್ತಿ ಹೆಗಲಮೇಲೆ ಕೂರಿಸಿಕೊಳ್ಳುತ್ತಾನೆ. ತಂದೆ-ಮಗನ ಮೂಕರಾಜಿಯು ಅನಿರೀಕ್ಷಿತ ದಲ್ಲಿ ಚಿತ್ರ ಮುಗಿಯುತ್ತದೆ.

ಈ ಚಿತ್ರಗಳಲ್ಲಿ, ಬುಡದಿಂದ ತುದಿಯತನಕ, ಪ್ರತಿಯೊಂದು ಸಣ್ಣ ವಿವರ ಗಳಲ್ಲೂ ಕಾಣಬರುವ ಅತ್ಯಂತ ಅಧಿಕೃತವೆನ್ನಿಸುವ ವಾಸ್ತವತೆ, ಸಹಜತೆ ಮೊತ್ತ ಮೊದಲು ನಮ್ಮ ಗಮನ ಸೆಳೆಯುತ್ತದೆ. ದಾಖಲು ಚಿತ್ರಗಳಲ್ಲಿ ಕಾಣುವಂಥ ವಾಸ್ತ ವತೆಯ ಕಠೋರನಿಷ್ಠೆ ಇಲ್ಲಿ ವ್ಯಕ್ತವಾಗುತ್ತದೆ. ಹಾಗಿದ್ದರೂ ಈ ಚಿತ್ರಗಳು ಕೇವಲ 'ದಾಖಲೆ' ಅಥವಾ 'ವರದಿ'ಯಾಗದೆ, ಅಸಂಖ್ಯಾತ ಧ್ವನಿಪರಂಪರೆಗಳನ್ನು ಒಳ ಗೊಳ್ಳುತ್ತ, ಸಂಕೀರ್ಣ ಬದುಕಿನ ಜೀವಂತ ಕೃತಿಗಳಾಗುತ್ತವೆ. ವಾಸ್ತವವಾದ 'ವಸ್ತು'ಗಳೊಂದೊಂದೂ ಪ್ರತಿಮೆಗಳಾಗಿ ಪ್ರತೀಕ-ಸಂಕೇತಗಳಾಗಿ ಬೆಳೆದು ಕೊಳ್ಳುತ್ತ ಹೋಗುತ್ತವೆ. ಈ ಚಿತ್ರಗಳಲ್ಲಿ ಬರುವ ರೈಲಿನ ಪ್ರಸಿದ್ಧ ಉದಾಹರಣೆ ಯನ್ನೇ ನೋಡಬಹುದು. ಮೊದಲ ಚಿತ್ರದಲ್ಲಿ ಕೇವಲ ದೂರದ ಸಪ್ಪಳವಾಗಿ, ಬಯಕೆಯ ಕನಸಾಗಿ, ಒಮ್ಮೆ ಮಾತ್ರವೇ ನೋಡಿದೆನೋ ಇಲ್ಲವೋ ಎನ್ನುವಷ್ಟು ಅಲ್ಪದಲ್ಲಿ ಗುಡುಗಿ ಮಿಂಚಿ ಧಾವಿಸಿದ ಬೆರಗಾಗಿ ಬರುವ ರೈಲು ಎರಡನೇ ಚಿತ್ರದಲ್ಲಿ ಈ ಕುಟುಂಬದ ಸ್ಥಳಾಂತರಗಳಿಗೆ ಸಾಧನವಾಗುತ್ತದೆ; ನಗರದ ಹೊಸ ಸಂಸ್ಕೃತಿಯ ಪರಿಚಯಕ್ಕೆ ದಾರಿ ಸಾಗಿಸಿಕೊಡುತ್ತದೆ; ಮೂರನೇ ಚಿತ್ರದಲ್ಲಿ ಅಪೂ ರೈಲ್ವೆ ಸ್ಟೇಷನ್ ಪಕ್ಕದಲ್ಲಿ, ರೈಲಿನ ಒಡನಾಡಿಯಾಗಿ ಬದುಕುತ್ತಾನೆ; ಒಂದೊಂದಕ್ಕೂ ಕೂಡಿ, ಕತ್ತ ರಿಸಿ, ಜತೆಯಾಗಿ ಸಾಗುವ ಅಸಂಖ್ಯ ಹಳಿದಾರಿಗಳನ್ನು ತುಳಿಯುತ್ತ, ಹಗಲು ರಾತ್ರಿ ಅದರ ಸದ್ದು ಸಿಳ್ಳುಗಳಲ್ಲಿ ಬೆರೆತುಕೊಂಡು ಬದುಕುತ್ತಾನೆ; ಸಾಯಬೇಕೆನ್ನಿಸಿದಾಗ, ರೈಲಿಗೆ ಸಿಕ್ಕು ಸಾಯಲು ಯತ್ನಿಸುತ್ತಾನೆ. ಉದ್ದಕ್ಕೂ, ರೈಲು ರೈಲಷ್ಟೇ ಆಗದೆ. ಅಪೂನ ಬದುಕಿಗೆ ಸವಾಲಾಗಿ ಮಾಪಕವಾಗಿ ಬರುವ ಹೊಸ ಸಂಸ್ಕೃತಿಗೆ ಪ್ರತೀಕ ವಾಗುತ್ತದೆ.

ಇದೇ ರೀತಿ, ಹಳ್ಳಿಯ ಮನೆ ಹತ್ತಿರದ ಅಂತರಗಂಗೆ ಬೆಳೆದ ಹೊಂಡ, ಬಿದಿರು ಮೆಳೆಗಳ ಕಿರುದಾರಿ; ಆಕಾಶದಲ್ಲಿ ರಂಗೋಲಿ ರಚಿಸಿ ಬನಾರಸಿಯ ಪ್ರತ್ಯಭಿಜ್ಞಾನ ವೆನಿಸುವ ಪಾರಿವಾಳಗಳು, ಧರ್ಮ ನಾರುವ ಸೋಪಾನಘಟ್ಟಗಳು, ಕಣ್ಣುಮುಚ್ಚಿ ಮೆಲುಕು ಹಾಕುತ್ತ ನಿಲ್ಲುವ ದನಕರುಗಳಿಗೆ ನೆಲೆಯಾದ ಕಿರು ಓಣಿಗಳು; ಕಲ್ಕತ್ತೆಯ

ರೈಲುದಾರಿ, ಸೇತುವೆ, ನದಿ—ಮುಂತಾದ ಒಂದೊಂದೂ ಅನುಭವದ ಧ್ವನಿಸರಂಪರೆಗಳನ್ನು ಬೆಳೆಸುತ್ತ ಸಂಕೀರ್ಣಗೊಳಿಸುತ್ತ ಹೋಗುವ ಸಾಧನಗಳಾಗುತ್ತವೆ.

ಈ ಚಿತ್ರಗಳಲ್ಲಿ ವ್ಯಕ್ತವಾಗುವ ಇನ್ನೊಂದು ಪ್ರಮುಖ ಅಂಶ, ಇವುಗಳ ಹಿಂದಿರುವ ಆಳವಾದ ಮಾನವೀಯ ದೃಷ್ಟಿ. ಆದರೆ, ಈ ಮಾನವೀಯ ದೃಷ್ಟಿ ಅತ್ಯಂತ ಪ್ರೌಢವೂ ವಿದಗ್ಧವೂ ಆಗಿರುವ ಕಾರಣ ಚಿತ್ರಗಳಲ್ಲಿ ಎಲ್ಲೂ ಭಾವಾತಿರೇಕ, ಆತ್ಮಮರುಕಗಳು ಕಾಣಿಸುವುದಿಲ್ಲ. ಪಾತ್ರಗುಣಗಳ ಸಂಕೀರ್ಣತೆಯನ್ನು ಚಿತ್ರಿಸುವುದರಲ್ಲಿ (ಉದಾ—ನಿಷ್ಠುರ ನ್ಯಾಯವಂತಿಕೆಯಲ್ಲಿ ಮರ್ಯಾದೆಯಿಂದ ಬದುಕಬೇಕೆನ್ನುವ ಛಲದ ತಾಯಿ, ಒಮ್ಮೆ, ಬಿದ್ದ ತೆಂಗಿನಕಾಯನ್ನು ಯಾರಿಗೂ ಕಾಣದಹಾಗೆ ಕದ್ದೊಯ್ಯುವುದು ಇ.,), ಪಾತ್ರ-ಪಾತ್ರಗಳ ಸಂಕೀರ್ಣ ಸಂಬಂಧವನ್ನು ಚಿತ್ರಿಸುವುದರಲ್ಲಿ (ಉದಾ—ತಾಯಿ ಮತ್ತು ಮುದುಕಿಯ ಸಂಬಂಧ, ತಾಯಿ ಮತ್ತು ಮಗನ ಸಂಬಂಧ, ಅಪೂ ಮತ್ತು ಮಗುವಿನ ಸಂಬಂಧ ಇ.,) ಕಾಣುವ ಪ್ರೌಢಿಮೆ ಅಸಾಧಾರಣವಾದದ್ದು.

ಎಲ್ಲಕ್ಕಿಂತ ಹೆಚ್ಚಾಗಿ, ತನ್ನ 'ವಸ್ತು'ವನ್ನು ಕೃತಿಯ 'ಪ್ರತಿರೂಪ'ದಲ್ಲಿ ಮೂರ್ತಗೊಳಿಸಿಕೊಡುವುದಕ್ಕೆ ಬೇಕಾದ ಸಿನೆಮಾ ಭಾಷೆಯ ಮೇಲಿನ ಪ್ರಭುತ್ವವನ್ನು ರಾಯ್ ಸಂಪೂರ್ಣ ಸಾಧಿಸಿಕೊಂಡಿದ್ದಾರೆ ಎನ್ನುವುದನ್ನು ಗಮನಿಸಬೇಕು. ಚಿತ್ರದ ವಾಸ್ತವತೆ, ಮಾನವೀಯತೆ, ಪ್ರೌಢಿಮೆ ಮುಂತಾದವುಗಳೆಲ್ಲ ಸಿದ್ಧಿಸಿರುವುದು, ಅಂತಿಮವಾಗಿ ಅವರಿಗೆ ಈ ಸಿನೆಮಾ ಭಾಷೆಯ ಮೇಲಿರುವ ಅಸಾಮಾನ್ಯ ಹತೋಟಿಯಿಂದಲೇ. ಒಂದೊಂದೂ ಚೌಕಟ್ಟಿನ ವಿನ್ಯಾಸವನ್ನು ನಿರ್ಧರಿಸುವಲ್ಲಿ, ವಸ್ತುಚಲನೆ ಕೆಮೆರಾಚಲನೆಗಳಿಂದ ಹಿಡಿದು ಸ್ಪಷ್ಟಾಸ್ಪಷ್ಟವಾದ ಅನೇಕ ಬಗೆಯ ಚಲನೆಗಳೆಲ್ಲವನ್ನೂ ನಿಯಂತ್ರಿಸಿಕೊಂಡು ಆ ಮೂಲಕ ಹಾಗೂ ಅನಂತರದ 'ಸಂಕಲನ'ದ ಮೂಲಕ 'ಚಿತ್ರಲಯ'ವನ್ನು ಸೃಷ್ಟಿಸುವುದರಲ್ಲಿ—ಈ ಭಾಷಾಸಿದ್ಧಿಯನ್ನು ಕಾಣಬಹುದು. ಮುದುಕಿ, ತನ್ನ ಹರಿದ ಛಾದರವನ್ನು ಹೊಲಿಯುವುದಕ್ಕಾಗಿ, ಸೂಜಿಯ ತೂತಿನೊಳಕ್ಕೆ ದಾರ ಪೋಣಿಸಲು ನಡೆಸುವ ವಿಫಲ ಸಾಹಸವನ್ನು ಸಮೀಪದಿಂದ ನಿಂತು ಕಾದುನೋಡುವ ಒಂದು ಸಣ್ಣ ವಿವರದ ಚಿತ್ರಣದಲ್ಲಿ ಕೂಡ ಈ ಅಂಶ ಕಾಣಸಿಗುತ್ತದೆ. ಮಳೆಯ ಮುಸಲಧಾರೆಗಳಿಗೆ ಮೈಕೊಟ್ಟು ಮುಖಕೊಟ್ಟು ಆನಂದಾತಿರೇಕದಲ್ಲಿ ಸುತ್ತು ಹೊಡೆಯುವ ದುರ್ಗಾಳ ಚಿತ್ರ, ಗ್ರೀಷ್ಮಾಂತ್ಯದಲ್ಲಿ ಮೇಲುತೆರೆಗಳ ಮೇಲೆ ನಡೆಯುವ ಚಿಟ್ಟೆ ಕುಣಿತ, ಬನಾರಸಿನ ಪಾರಿವಾಳಗಳು, ಹರಯದ ಕಸಿಗೆ ಹುಂಡೆರೆಯನ್ನು ಕಟ್ಟುವ ಕಲ್ಕತ್ತೆಯ ರಾತ್ರಿದೀಪಗಳು—ಮುಂತಾಗಿ, ವಿಶ್ವ ಚಲನಚಿತ್ರದ ಭಾಷಾಪರಂಪರೆಯಲ್ಲೇ ದಾಖಲೆಯಾಗಿ ಸಾಧಿಸಿದ ಅಪೂರ್ವಗಳು ಈ ಚಿತ್ರಗಳಲ್ಲಿ ಕಾಣಸಿಗುತ್ತಗೆ.

ಸಿನೆಮಾ ಬೆಳೆದದ್ದು 'ವಿಶ್ವಭಾಷೆ'ಯಾಗಿ, 'ವಿಶ್ವಸಂಪ್ರದಾಯ'ವಾಗಿ. ವಾಕ್

ಚಿತ್ರ ಬಂದ ಹೊಸದರಲ್ಲಿ ಕೊಂಚ ಗೊಂದಲ ಕಂಡಿತಾದರೂ ಮುಂದೆ ಈ 'ವಿಶ್ವ ಸಂಪ್ರದಾಯ' ಸ್ಥಿರಗೊಂಡಿತು. ಇಂಡಿಯಾದ ಚಲನಚಿತ್ರ ಮಾತ್ರ ಇದಕ್ಕೆ ಅಪವಾದ ವಾಗಿ ವಿಶ್ವಸಂಪ್ರದಾಯದಲ್ಲಾದ ಬೆಳವಣಿಗೆಗಳನ್ನು ತನ್ನಲ್ಲಿ ಮೈಗೂಡಿಸಿಕೊಳ್ಳದೆ ತನ್ನ ಪಾಡಿಗೆ ತಾನು ತೊದಲಿಕೊಳ್ಳುತ್ತ ಉಳಿದಿತ್ತು. ರಾಯ್ ಮೊತ್ತಮೊದಲಿಗೆ ಇಂಡಿಯಾದ ಚಲನಚಿತ್ರವನ್ನು ವಿಶ್ವಪರಂಪರೆಯೊಡನೆ ಜೊತೆಗೂಡಿಸಿದರು. ಫ್ಲಾಹರ್ಟಿಯ ಡಾಕುಮೆಂಟರಿಗಳಿಂದ ಇಟಲಿಯ **ನಿಯೊರಿಯಲಿಸ್ಟ್**ರ ಚಿತ್ರಗಳ ತನಕದ ಬೆಳವಣಿಗೆಯನ್ನು ರಾಯ್ ರಕ್ತಗತ ಮಾಡಿಕೊಂಡರು; ಅವುಗಳನ್ನು ಮೀರಿ ಬೆಳೆದರು. ಫ್ಲಾಹರ್ಟಿಯ ಶೈಲಿಯನ್ನು ಸಮಕಾಲೀನ ಸಾಮಾಜಿಕ ಸತ್ಯಗಳ ಅನ್ವೇಷಣೆಗೆ ಮತ್ತೂ ಹೆಚ್ಚು ಒಗ್ಗುವಂತೆ ಬೆಳೆಸಿಕೊಂಡರು. ನಿಯೊ ರಿಯಲಿಸ್ಟರ ವಾಸ್ತವತೆ ಮಾನವೀಯತೆಗಳಲ್ಲಿ ಹೊಸ ಪ್ರೌಢಿಮೆಯನ್ನು ಅಳಿಸಿಕೊಟ್ಟರು.

ವಿಶ್ವಚಲನಚಿತ್ರದಲ್ಲಿ ಒಮ್ಮೆ ಉಬ್ಬರ ತಂದ **ನಿಯೊ ರಿಯಲಿಸಮ್**, ಆಗ, ಶಕ್ತಿಗುಂದಿಯಾಗಿತ್ತು; ಅದರ ಮುಂದಿನ ಘಟ್ಟವಾಗಿ, ಯುರೋಪ್‌ನಲ್ಲಿ 'ಹೊಸ ಅಲೆ' ಮೊಳೆತುಕೊಳ್ಳುತ್ತಿತ್ತು. ಇಂಥ ಕಾಲದಲ್ಲಿ ರಾಯ್, ಇಂಡಿಯಾದ ಸಂದರ್ಭಕ್ಕೆ ಉಚಿತವಾದ ನಿಯೊ ರಿಯಲಿಸಮ್‌ನ ಮುಂದಿನ ಹಂತವನ್ನು ಪ್ರತ್ಯೇಕವಾಗಿಯೇ ಸಾಧಿಸಿದರು.

ಸ್ಟುಡಿಯೊ ನಟರು ಮುಂತಾದವುಗಳಿಗೆ ಬದಲಾಗಿ ನಿಜಸ್ಥಳ, ನಿಜವ್ಯಕ್ತಿಗಳನ್ನೇ ಬಳಸುವ ನಿಯೊ ರಿಯಲಿಸಮ್‌ನ ಛಲಕ್ಕಿಂತ ಹೆಚ್ಚಾಗಿ, ಅಂತಿಮವಾಗಿ ಸಾಧಿತ ವಾಗುವ 'ವಾಸ್ತವಬಿಂಬ'ದ ಬಗ್ಗೆ ರಾಯ್ ಹೆಚ್ಚಿನ ಗಮನ ಕೊಟ್ಟರು. ನಿಜಸ್ಥಳ ನಿಜವ್ಯಕ್ತಿಗಳಲ್ಲದೆ, ಸ್ಟುಡಿಯೋ ಸಿದ್ಧನಟರು ಮುಂತಾದ ಸಾಧನಗಳನ್ನೂ ಬಳಸಿ ಕೊಳ್ಳಲು ನಿರಾಕರಿಸಲಿಲ್ಲ. (ಈ ಚಿತ್ರಗಳಲ್ಲಿ ನಿಜದೃಶ್ಯಗಳನ್ನು ಸ್ಟುಡಿಯೋದಲ್ಲಿ ಪ್ರತಿ ಮಾಡಿ ಬಳಸಿಕೊಂಡದ್ದು; **ಚುನ್ನಿ ಬಾಲಾ, ಕನೂ ಬ್ಯಾನರ್ಜಿ, ಸೌಮಿತ್ರ ಚಟರ್ಜಿ** ಮುಂತಾದ ಪ್ರಸಿದ್ಧ ನಟರನ್ನು ಬಳಸಿಕೊಂಡದ್ದು; ನಟನೆಗೆ ಹೊಸಬ ರಾದರೂ ಗ್ರಾಮೀಣ ಪಾತ್ರಗಳಿಗೆ ನಗರದ ಹೊಸ ನಾಗರೀಕತೆಯ ಜನರನ್ನು ಬಳಸಿ ಕೊಂಡದ್ದು—ಇತ್ಯಾದಿ ಗಮನಿಸಬಹುದು.)

ನಿಯೊ ರಿಯಲಿಸಮ್‌ನ ಮಾನವೀಯತೆ, ರಾಜಕೀಯ ತತ್ವಗಳಿಗೆ ಬದ್ಧವಾ ದಂಥದು. ಆದರೆ ರಾಯ್, ಯಾವೊಂದು ಸಿದ್ಧಾಂತದ ಬೆಳಕನ್ನೂ ಬಯಸದೆ ಬದು ಕನ್ನು ನೇರ, ಪ್ರೀತಿಯಿಂದ, ಎಚ್ಚರದಿಂದ, ಆಳವಾಗಿ ಪರಿಶೀಲಿಸಲು ಪ್ರಯತ್ನಿಸಿದರು.

ಗಾಢವಾದ ಅನುಭವಗಳಿಂದ ರೂಪಿತವಾದ ವಸ್ತು ಹಾಗೂ ಅಸಾಧಾರಣ ಕೌಶಲದಿಂದ ಮಾಧ್ಯಮದ ಮೇಲೆ ಸಾಧಿಸಿಕೊಂಡ ಪ್ರಭುತ್ವ—ಇವೆರಡರ ಸಂಯೋಜ ನೆಯ ಫಲವಾಗಿ ಈ ಚಿತ್ರಗಳು ರೂಪುಗೊಂಡಿವೆ. ಸಾಹಿತ್ಯದಲ್ಲಿ **ಠಾಕೂರ್** ಹೇಗೋ ಹಾಗೆ, ಪ್ರಬುದ್ಧವಾದ ಅದಮ್ಯ ಸೃಜನಾತ್ಮಕ ಚೇತನವೊಂದು, ಇಂಡಿಯಾದಲ್ಲಿ

ಮೊತ್ತ ಮೊದಲಬಾರಿಗೆ ಪ್ರಕಟವಾದ್ದನ್ನು ನಾವು ಈ ಚಿತ್ರದಲ್ಲಿ ಕಾಣುತ್ತೇವೆ.

ರಾಯ್ ಅವರ 'ಅಪೂತ್ರಿವಳಿ', ಒಂದು ಗ್ರಾಮೀಣ ಕುಟುಂಬದ ಹಾಗೂ ಅದರಲ್ಲಿ ಹುಟ್ಟಿ ಹೊಸ ಬದುಕಿಗೆ ತೆರೆದುಕೊಳ್ಳಲು ಪ್ರಯತ್ನಿಸಿದ ತರುಣನೊಬ್ಬನ ವಾಸ್ತವವೂ ಮಾನವೀಯವೂ ಆದ ಕಥೆ. ಆದರೆ ಅಷ್ಟೆ ಅಲ್ಲ. ಪರಂಪರಾಗತ ಜೀವನ ಕ್ರಮದಲ್ಲಿ ಜೀವಚ್ಛವವಾಗಿ ಬದುಕುತ್ತಿದ್ದ ಇಂಡಿಯಾ, ಹೊಸ ನಾಗರೀಕತೆಯ ಸವಾಲಿನಿಂದ ತಲ್ಲಣಿಸಿ, ಹೊಸ ಬದುಕಿನ ಹಾದಿಗಳನ್ನು ಕಂಡುಕೊಳ್ಳಲು ಕಾತರಿಸಿದ್ದರ ಕಥೆಯೂ ಆಗಿದೆ. ಇಂಡಿಯಾದ ಈ ಕಾಲದ ಇತಿಹಾಸದ ಸಮಗ್ರ ಅನುಭವವನ್ನು ಬಗೆದು ಬಗೆದು ಹುಡುಕಿಕೊಳ್ಳುವ ಕಥೆ.

# ಪಥೇರ್ ಪಾಂಚಾಲಿಯ ವ್ಯಕ್ತಿ-ಪರಿಸರಗಳು

(ಪ್ರೊ. ಸತೀಶ್ ಬಹಾದುರ್ ಅವರ ಲೇಖನ ಆಧರಿಸಿದ್ದು.)



ಈ ಚಿತ್ರದ ಕಾಲ ಸುಮಾರಾಗಿ ೧೯೧೦-೧೯೨೦. ಸ್ಥಳ, ಬಂಗಾಲದ ಒಳ ಹಳ್ಳಿಗಾಡಿನಲ್ಲಿ ಅವಿತುಕೊಂಡಂತಿರುವ ಚಿಕ್ಕ ಹಳ್ಳಿ, ನಿಶ್ಚಿಂದಿಪುರ. ಇಲ್ಲಿನ ಜನಸಂಖ್ಯೆ ದಶಕಗಳಲ್ಲಿ ಎಣಿಸಬಹುದಾದ್ದು. ಈ ಜನ ಎಷ್ಟೋ ತಲೆಮಾರುಗಳಿಂದ ಸಂಪ್ರದಾಯದ ಬದುಕಿಗೆ ಭದ್ರವಾಗಿ ಅಂಟಿಕೊಂಡೇ ಬಾಳಿಕೊಂಡು ಬಂದವರು. ಆದರೆ ತೀರ ಈಚೀಚೆಗೆ, ಸಾಮಾಜಿಕ ಆರ್ಥಿಕ ತಾಂತ್ರಿಕ ಪರಿವರ್ತನೆಗಳ ಹೊರಗಿನ ಝಳ ಇಲ್ಲಿಗೂ ತಾಕತೊಡಗಿರುವ ಸೂಚನೆಗಳು ಕಾಣಿಸುತ್ತಿವೆ.

ಈ ಊರಿನ ಹರಿಹರ ರಾಯ್ ಕುಟುಂಬವೇ ಚಿತ್ರದ ಕೇಂದ್ರ. ಯೌವನ ದಾಟಿರುವ ಹರಿಹರ ರಾಯ್, ಅವನ ಪತ್ನಿ ಸರ್ವಜಯಾ, ಮಗಳು ದುರ್ಗಾ, ಚಿತ್ರದ ಅವಧಿಯಲ್ಲೇ ಜನ್ಮತಾಳುವ ಅಪೂ (ಅಪೂರ್ವಕುಮಾರರಾಯ್) ಮತ್ತು ವಿಧವೆಯೂ ಹಣ್ಣುಹಣ್ಣು ಮುದುಕಿಯೂ ಆಗಿರುವ ಈ ಕುಟುಂಬದ ದೂರದ ಸಂಬಂಧಿ ಇಂದಿರಾ (ಬೇರೆ ಗತಿಯಿಲ್ಲದೆ ಇವರ ಕುಟುಂಬದ ಜೊತೆಗೇ ವಾಸಿಸುತ್ತಿರುವವಳು)—ಇವರು ಕುಟುಂಬದ ಸದಸ್ಯರು.

ಹರಿಹರ ತಕ್ಕಮಟ್ಟಿನ ಪಾಂಡಿತ್ಯ ಗಳಿಸಿಕೊಂಡಿರುವ ಬ್ರಾಹ್ಮಣ. ಮನೆತನದ ವೃತ್ತಿಯಾದ ಪೌರೋಹಿತ್ಯವನ್ನೇ ನಡೆಸಿಕೊಂಡು ಬರುತ್ತಿದ್ದಾನೆ. ಆದರೆ ಈಚೆ, ಈ ವೃತ್ತಿಯಿಂದ ಇವನ ಜೀವನ ಸಾಗದು. ಜೀವನ ನಿರ್ವಹಣಕ್ಕಾಗಿ ಆತ, ಶ್ರೀಮಂತ ಜಮೀನ್ದಾರನೊಬ್ಬನಲ್ಲಿ ಕಣಿಕನಾಗಿ ಕೆಲಸಮಾಡಬೇಕಾಗುತ್ತದೆ. ಹಗಲುಗನಸಿನಲ್ಲಿ ಮೈಮರೆವ ಕಲ್ಪಕಮನಸ್ಸಿನ ಈತನಿಗೆ ಕವಿತೆ ನಾಟಕಗಳನ್ನು ಬರೆಯುವುದರಲ್ಲಿ ಆಸಕ್ತಿ.

ಈ ಕುಟುಂಬದಲ್ಲಿರುವವರು ಪರಸ್ಪರವಾಗಿ ಸಾಧಿಸಿಕೊಳ್ಳುವ ಹಾಗೂ ಇವರು ಹೊರಗಿನ ವ್ಯಕ್ತಿಗಳೊಡನೆ ರೂಢಿಸಿಕೊಳ್ಳುವ ಮಾನವೀಯ ಸಂಬಂಧಗಳೇ ಚಿತ್ರದ ಮುಖ್ಯ ಕಾಳಜಿ ಎನ್ನಬಹುದು.

ಈ ಕುಟುಂಬಕ್ಕೆ ನೆರೆಯಾಗಿ ಇನ್ನೆರಡು ಕುಟುಂಬಗಳಿವೆ. ಒಂದು, ಮುಖರ್ಜಿ

ಕುಟುಂಬ ; ಇನ್ನೊಂದು, ನೀಲಮಣಿಯ ಕುಟುಂಬ. ಹರಿಹರ ರಾಯ್‌ಗೂ ಮುಖರ್ಜಿ ಕುಟುಂಬಕ್ಕೂ ದೂರದ ದಾಯವಾದಿ ಸಂಬಂಧವಿದೆ. ಅವರದು ಎಷ್ಟೋ ಅನುಕೂಲ ವಾಗಿರುವ ಕುಟುಂಬ. ಸಾಕಷ್ಟು ಜಮೀನಿದೆ, ಲೇವಾದೇವಿಯಿದೆ. ಹಿಂದೆ ಹರಿಹರನ ಅಣ್ಣ ಅವರಿಂದ ಮುನ್ನೂರು ರೂಪಾಯಿ ಸಾಲ ಮಾಡಿದ್ದರಿಂದ, ಹರಿಹರನಿಗಿದ್ದ ಸಣ್ಣ ತೋಟ ಈಗ ಅವರ ಪಾಲಾಗಿದೆ. ಆ ಕುಟುಂಬದ ಸದಸ್ಯರೆಂದರೆ (ಚಿತ್ರದಲ್ಲಿ ಕಾಣು ವಂತೆ) ಮನೆಯ ಹಿರಿಯ ಹೆಂಗಸು ಶೇಜ್‌ಬೌ, ಅವಳ ಮಗಳು ರಾಣು, ಸಂಬಂಧಿಕ ಹುಡುಗಿ ತುನು, ಸುಥೆ ಎಂಬ ಹುಡುಗ—ಮುಂತಾದವರು.

ನೀಲಮಣಿಯ ಕುಟುಂಬವೆಂದರೆ ಆತ, ಆತನ ಪತ್ನಿ ಮತ್ತು ಮಗಳು ಬಿನಿ.

ಹರಿಹರ ರಾಯ್‌ನ ಮನೆ, ಜೋಪಡಿಯೆನ್ನುವಂತಿದೆ; ಜೀರ್ಣಾವಸ್ಥೆಯಲ್ಲಿದೆ. ಅಡುಗೆಮನೆ ಮತ್ತು ಎರಡು ಕೋಣೆಗಳಿರುವ ಒಂದು ಭಾಗ, ಅದಕ್ಕೆ ಚಾವಡಿಗಳು ಹಾಗೂ ಎದುರು ತುಲಸಿಕಟ್ಟೆಯಿರುವ ಅಂಗಳ ; ಅಂಗಳದ ಸುತ್ತ ಕೊಟ್ಟಿಗೆ ಹಾಗೂ ಕೆಲವು ಗುಡಿಲುಗಳು ; ಸುತ್ತಾ ಒಂದು ಮುರಿದು ಬೀಳುತ್ತಿರುವ ಮಣ್ಣಿನ ಪಾಗಾರ— ಇತ್ಯಾದಿ.

ಮನೆಯ ಸಮೀಪ ಒಂದು ನೀರಿನ ಹೊಂಡ; ಸುತ್ತಲೂ ಬಿದಿರು ಮೆಳೆಗಳು. ಅದರಾಚೆಗೆ ಮುಖರ್ಜಿಯವರ ಮನೆ, ತೋಟ. ಮುಖರ್ಜಿಯವರ ಮನೆ ಕಲ್ಲಿನಲ್ಲಿ ಭದ್ರವಾಗಿ ಕಟ್ಟಿದ್ದು ; ವಿಶಾಲವಾದ ಅಂಗಳ ಕಲ್ಲಿನ ಪಾಗಾರಗಳಿಂದ ಸುತ್ತುವರಿದದ್ದು. ಅಂಗಳದ ಹೊರಭಾಗದಲ್ಲಿರುವ ನೀರಿನ ಬಾವಿಯಿಂದ ಊರಿನವರೆಲ್ಲ ಕುಡಿಯುವ ನೀರನ್ನು ಒಯ್ಯುತ್ತಾರೆ.

ನೀಲಮಣಿಯ ಮನೆ ಅಲ್ಲೇ ಎಲ್ಲೋ ಸಮೀಪದಲ್ಲಿದೆ. ಊರ ಹೊರವಲಯದಲ್ಲಿ ರಾಜುವಿನ ಮನೆ. ಹರಿಹರನ ಮನೆಯಲ್ಲಿ ಜಗಳವಾದಾಗ, ಮುದುಕಿ ಆತನ ಆಶ್ರಯ ಪಡೆದುಕೊಳ್ಳುತ್ತಾಳೆ. ಪ್ರಸನ್ನ (ಉಪಾಧ್ಯಾಯ)ನ ಬಿಡಾರ ಒಂದು ಚಪ್ಪರವೆನ್ನು ವಂತಿದೆ; ಅದು ಅಂಗಡಿ, ಶಾಲೆ, ಬಿಡಾರ-ಎಲ್ಲವೂ. ಅದು ಕೂಡ ಹರಿಹರ ರಾಯ್‌ನ ಮನೆಗೆ ಸಾಕಷ್ಟು ದೂರವಾಗಿದೆ.

ಊರಿನಲ್ಲಿ ರಸ್ತೆಗಳಿಲ್ಲ. ಎಲ್ಲಿ ನೋಡಿದರೂ ಸಮೃದ್ಧವಾಗಿ ಬೆಳೆದ ಮರಗಿಡಗಳು, ಪೊದೆಗಳು, ಬಿದಿರು ಮೆಳೆಗಳು ; ಅವುಗಳ ಮಧ್ಯೆ ಸವೆದುಕೊಂಡಿರುವ ಅಂಕುಡೊಂಕಾ ದ ಕಾಲುದಾರಿಗಳು. ಅಲ್ಲಲ್ಲಿ ನೀರಿನ ಹೊಂಡಗಳು ಕಾಣುತ್ತವೆ. ಇಲ್ಲಿನ ಹವೆಗೆ ಮಳೆ ಗುಡುಗು ಮಿಂಚುಗಳು ಚಿರಪರಿಚಿತ. ಇಲ್ಲಿನ ಪ್ರಕೃತಿ ಸಮೃದ್ಧವೂ ಹೌದು, ಏಕ ತಾನದ ಬೇಸರವೂ ಹೌದು, ಮಾರಕವೂ ಕೂಡ.

ಹಳ್ಳಿಯಿಂದ ಸಾಕಷ್ಟು ದೂರ ಸರಿದರೆ, ತೆರೆದ ಹೊಲಗದ್ದೆಗಳ ಆವರಣ ಕಾಣ ಸಿಕ್ಕುತ್ತದೆ. ದೂರದೂರದ ನಗರಗಳಿಗೆ ಸಂಪರ್ಕ ಕಲ್ಪಿಸುವ ಟೆಲಿಗ್ರಾಫ್ ಕಂಬ-ತಂತಿ ಗಳು ಅಲ್ಲಿ ಹೊಲದಲ್ಲಿ ಹಾದುಹೋದದ್ದು ಕಾಣುತ್ತೇವೆ; ಪಕ್ಕದಲ್ಲಿ ರೈಲು ರಸ್ತೆಯೂ

ಇದೆ. ನೀರವ ರಾತ್ರಿಗಳಲ್ಲಿ, ಹಾದುಹೋಗುವ ರೈಲಿನ ಸದ್ದು ಹರಿಹರನ ಮನೆಯ ತನಕವೂ ಕೇಳಿಸುತ್ತದೆ.

ಕಥೆಯ ಬೇರೆ ಬೇರೆ ಘಟ್ಟಗಳಲ್ಲಿ ಊರಿನ ಜನ ಹಲವರು ಕಾಣಿಸಿಕೊಳ್ಳುತ್ತಾರೆ. ಪ್ರಸನ್ನ ಊರಿನ ಅಂಗಡಿಕಾರ, ಮಕ್ಕಳಿಗಾಗಿ ಶಾಲೆ ತೆರೆದು ಉಪಾಧ್ಯಾಯನೂ ಆಗಿದ್ದಾನೆ. ಮಜುಂದಾರ್ ಊರಿನ ಒಬ್ಬ ಹಿರಿಯ; ಜಾತ್ರಾದ ವ್ಯವಸ್ಥೆಯಲ್ಲಿ ಆತ ಆಸಕ್ತಿ ತೋರಿಸುತ್ತಾನೆ. ಚಕ್ರವರ್ತಿ ಮೀನುಗಾರ; ಆಗಾಗ ಗಾಳ ಹಿಡಿದು ತಿರುಗುವುದನ್ನು ಕಾಣುತ್ತೇವೆ. ಭಿಕ್ಷುಕನೊಬ್ಬ ಆಗಿಂದಾಗ ಭಿಕ್ಷೆಯಲ್ಲಿ ತೊಡಗಿ ಕಾಣಿಸಿಕೊಳ್ಳುತ್ತಾನೆ. ಅಲ್ಲದೆ—ಎಲ್ಲ ಊರಲ್ಲಿರುವ ಹಾಗೆ, ಗಂಡಸರು ಹೆಂಗಸರು ಮಕ್ಕಳು ಅಲ್ಲಿದ್ದಾರೆ; ಬೇರೆ ಬೇರೆ ಸಂದರ್ಭಗಳಲ್ಲಿ ಕಣ್ಣಿಗೆ ಬೀಳುತ್ತಾರೆ.

ಹೊರ ಊರುಗಳಿಂದಲೂ ಜನ ಇಲ್ಲಿಗೆ ಬರುತ್ತಿರುತ್ತಾರೆ—ಮಿಠಾಯಿ ಮಾರುವವ, ದುರ್ಗಾಳನ್ನು ನೋಡಲು ಬರುವ ವೈದ್ಯ, ಸಮಾರಂಭಕ್ಕಾಗಿ ಆಗಮಿಸುವ ವಾದ್ಯಗಾರರು, ಉತ್ಸವ ಕಾಲದಲ್ಲಿ ಬರುವ ಜಾತ್ರಾ ಮೇಳದವರು, ಮಕ್ಕಳನ್ನು ಆಕರ್ಷಿಸುವ ಬಯಾಸ್ಕೋಪ್‌ವಾಲಾ—ಮುಂತಾಗಿ. ವಾದ್ಯಗಾರರು ನುಡಿಸುವ ಹಾಡು ಇಂಗ್ಲೀಷ್ ಶೈಲಿಯದು; ಮೊದಲ ಮಹಾಯುದ್ಧ ಕಾಲದಲ್ಲಿ ಪ್ರಸಿದ್ಧವಾಗಿದ್ದ ಹಳೆಯ ಇಂಗ್ಲೀಷ್ ಕವಾಯಿತು ಗೀತ.

ಇದಿಷ್ಟು ನಿಶ್ಚಿಂದಿಪುರದ ಪ್ರಪಂಚ.

ನಿಶ್ಚಿಂದಿಪುರದಿಂದ ಆಚೆ, ಮುಂದೆ ಹೋದರೆ, ದಶಘರ, ರಾಣಾಘಾಟ್ ಪಟ್ಟಣಗಳು ಸಿಗುತ್ತವೆ. ಹರಿಹರ ಅಲ್ಲಿಗೆ ಉದ್ಯೋಗ ಹುಡುಕಿಕೊಂಡು ಹೋಗುತ್ತಾನೆ. ಸರ್ವಜಯಾಳಿಗೆ ಆ ಊರುಗಳೆಲ್ಲ, ಗಂಡನಿಂದ ಕಾಗದ ಬರುವ ಸ್ಥಳಗಳೆಂದು, ಹೆಸರಿನಿಂದಷ್ಟೇ ಪರಿಚಿತ. ಇನ್ನೂ ತುಂಬ ದೂರದಲ್ಲಿ, ಬನಾರಸ್‌ನ ಪ್ರಾಚೀನ ಪಟ್ಟಣವಿದೆ. ಹಿಂದೆ, ಮದುವೆಯಾದ ಹೊಸತರಲ್ಲಿ, ಹರಿಹರ ಅಲ್ಲಿಯೇ ಕೆಲವು ವರ್ಷ ಉಳಿದುಕೊಂಡಿದ್ದ. ಚಿತ್ರದ ತುದಿಯಲ್ಲಿ ಮತ್ತೆ, ಈ ಕುಟುಂಬ ಹಳ್ಳಿ ಬಿಟ್ಟು ಬನಾರಸ್ ಕಡೆಗೇ ಹೊರಡುತ್ತದೆ.

ಇವೆಲ್ಲಕ್ಕಿಂತ ಇನ್ನೂ ಆಚೆ, ಉದಯಿಸುತ್ತಿರುವ ಹೊಸ ಇಂಡಿಯಾದ ಚಿಹ್ನೆಗಳಾಗಿರುವ ಡೆಲ್ಲಿ, ಆಗ್ರಾ, ಮುಂಬೈ, ಮದ್ರಾಸು..........ಕಲ್ಕತ್ತಾ ಮುಂತಾದ ನಗರಗಳಿವೆ. ಬಯಾಸ್ಕೋಪ್‌ವಾಲಾ ತನ್ನ ಇಣಕುಪೆಟ್ಟಿಗೆಯಲ್ಲಿ ಮಕ್ಕಳಿಗೆ ಆ ಊರುಗಳನ್ನು ಕಾಣಿಸುತ್ತಾನೆ. ಜಗತ್ತಿನಿಂದ ಪ್ರತ್ಯೇಕಗೊಂಡಂತಿರುವ ನಿಶ್ಚಿಂದಿಪುರದ ಈ ಚಿಕ್ಕ ಹಳ್ಳಿಯಲ್ಲಿ ಬೆಳೆಯುತ್ತಿರುವ ಅಪೂಗೆ—ಈ ನಗರಗಳೆಲ್ಲ ಆಸೆ ಕೆರಳಿಸುವ ದೂರದ ಕನಸುಗಳು........

# ಪಥೇರ್ ಪಾಂಚಾಲಿ

## (ಕಿರುದಾರಿಯ ಹಾಡು)

ಬಂಗಾಳಿ / ೧೯೫೫ / ಕಪ್ಪುಬಿಳುಪು / ೧೧೫ ನಿಮಿಷ

ಚಿತ್ರಲೇಖನ ಮತ್ತು ನಿರ್ದೇಶನ : ಸತ್ಯಜಿತ್ ರಾಯ್
ಆಧಾರ : ಬಿಭೂತಿ ಭೂಷಣ ಬ್ಯಾನರ್ಜಿ ಅವರ ಇದೇ ಹೆಸರಿನ ಕಾದಂಬರಿ
ಚಿತ್ರಗ್ರಹಣ : ಸುಬ್ರತೋ ಮಿತ್ರ
ಕಲಾ ನಿರ್ದೇಶಕ : ಬನ್ಸಿ ಚಂದ್ರಗುಪ್ತ
ಸಂಗೀತ : ರವಿಶಂಕರ್
ಶಬ್ದಗ್ರಹಣ : ದುರ್ಗದಾ ಮಿತ್ರ
ಸಂಕಲನ : ದುಲಾಲ್ ದತ್

### ಪಾತ್ರವರ್ಗ

ಹರಿಹರ ರಾಯ್
(ಕುಟುಂಬದ ಯಜಮಾನ) : ಕನೂ ಬ್ಯಾನರ್ಜಿ
ಸರ್ವಜಯಾ (ಆತನ ಪತ್ನಿ) : ಕರುಣಾ ಬ್ಯಾನರ್ಜಿ
ದುರ್ಗಾ (ಮಗಳು) ೧ : ರುಂಕಿ ಬ್ಯಾನರ್ಜಿ
೨ : ಉಮಾ ದಾಸ್‌ಗುಪ್ತಾ
ಇಂದಿರಾ (ಮುದುಕಿ) : ಚುನ್ನಿಬಾಲಾ ದೇವಿ
ಅಪೂ (ಮಗ) : ಸುಬೀರ್ ಬ್ಯಾನರ್ಜಿ
ಇತ್ಯಾದಿ



## ಭಾಗ: ಒಂದು

### (೧)

**ವರ್ಣನ :** ಮುಖರ್ಜಿಯವರ ಮನೆ. ಬೆಳಿಗ್ಗೆ ಮುಂಚೆ ತಾರಸಿಯ ಮೇಲಿರುವ ತುಳಸಿ ಕಟ್ಟೆಯ ಎದುರು ಶೇಜ್‌ಬೌ ಕೂತು ಪ್ರಾರ್ಥನೆ ಮಾಡುತ್ತಿದ್ದಾಳೆ. ಸದ್ದು ಕೇಳಿ ತಟ್ಟನೆ ತಿರುಗುತ್ತಾಳೆ.

ಶೇಜ್‌ಬೌ— ಯಾರದು ?

ಎದ್ದು, ತಾರಸಿಯ ಅಂಚಿನ ಕಟ್ಟೆಯ ಹತ್ತಿರ ಹೋಗಿ ಮುಂದೆ ಬಾಗಿ ನೋಡುತ್ತಾಳೆ.

ಶೇಜ್‌ಬೌ— (ಹೋಗುತ್ತ) ನೋಡು ನೋಡು ಈ ಹುಡುಗಿ ಮರದಲ್ಲಿ ಒಂದೇ ಒಂದು ಹಣ್ಣು ಕೂಡಾ ಇರೋಕೆ ಬಿಡೋಲ್ಲ.

**ಛೇದ :** ಹೊರಗೆ ತೋಟದಲ್ಲಿ, ಪುಟ್ಟ ಹುಡುಗಿ ದುರ್ಗಾ ತಟ್ಟನೆ ಮರೆಯಾಗುತ್ತಾಳೆ. ಆಮೇಲೆ, ಬಿದಿರು ಪೊದೆಯ ಬಳಿ ಕಾಣಿಸುತ್ತಾಳೆ— ಖುಷಿಯಾಗಿ ಕುಂಟು ಹಾರುತ್ತ ಬರುತ್ತಿದ್ದಾಳೆ. ಅಷ್ಟರಲ್ಲಿ, ಅಲ್ಲೇ ಕಾಲುದಾರಿಯಲ್ಲಿ ತಾಯಿ (ಸರ್ವಜಯಾ) ಬರುತ್ತಿರುವುದನ್ನು ಕಂಡು ನಿಲ್ಲುತ್ತಾಳೆ ; ಮೆಲ್ಲಗೆ ಹಿಂದಕ್ಕೆ ಹೆಜ್ಜೆ ಹಾಕುತ್ತ ಸರಿದು ಒಂದು ಪೊದೆಯಲ್ಲಿ ಅಡಗಿಕೊಳ್ಳುತ್ತಾಳೆ. ತಾಯಿ ಮುಂದಕ್ಕೆ ದಾಟಿ ಹೋದ ಮೇಲೆ, ಪೊದೆಯಿಂದ ಹೊರಕ್ಕೆ ಬಂದು ಮರಗಿಡಗಳ ನಡುವೆ ಹಾದು ಹೋಗುವ ಕಾಲುದಾರಿಯಲ್ಲಿ ಕದ್ದು ನಡೆಯುತ್ತಾಳೆ.

**ಛೇದ :** ಹರಿಹರ ರಾಯ್‌ನ ಮುರುಕಲು ಮನೆ. ದುರ್ಗಾ ಮನೆಯ ಅಂಗಳದೊಳಕ್ಕೆ ಬರುತ್ತಾಳೆ. ಒಂದು ಗಿಡದಮೇಲೆ ಉಗುಳಿ ಮುದುಕಿಯಿರುವ ಜಾವಡಿಗೆ ಹೋಗುತ್ತಾಳೆ. ಅಲ್ಲಿ, ಅವಳ ಮುರುಕು ಕೋಣೆಯಲ್ಲಿ ಇಣುಕಿ ಪಿಸುದನಿಯಲ್ಲಿ ಆಕೆಯನ್ನು ಕರೆಯುತ್ತಾಳೆ. ಅವಳಿಂದ ಉತ್ತರವಿಲ್ಲದಾಗ, ಅಲ್ಲೇ ಇರುವ ಒಂದು ಮಣ್ಣು ಮಡಕೆಯ ಮುಚ್ಚಳ ಎತ್ತುತ್ತಾಳೆ. ಅದರ ಒಳಕ್ಕೆ ಎರಡು ಪೇರಲ (ಸೀಬೆ) ಹಣ್ಣುಗಳನ್ನಿಟ್ಟು,

ಮೇಲೆ ಒಂದು ಬಾಳೆಕಾಯಿಯ ಚಿಪ್ಪನ್ನು ಇರಿಸುತ್ತಾಳೆ. ಮಡಕೆಯ ಮೇಲೆ ಬೀಸಣಿ ಕೆಯನ್ನು ಮುಚ್ಚಿಟ್ಟು ಮುಂದೆ ಹೋಗುತ್ತಾಳೆ. ಅಲ್ಲಿರುವ ಒಂದು ಮಡಕೆಯ ಮುಚ್ಚಳ ಎತ್ತಿಕೊಂಡು ಅದರಲ್ಲಿ ಹಾಲು ತುಂಬಿಕೊಳ್ಳುತ್ತಾಳೆ. ಅನಂತರ, ಒಂದು ಮಣ್ಣಿನ ಹರವಿಯ ಹತ್ತಿರ ಹೋಗಿ, ಅದರೊಳಗಿಂದ ಒಂದೊಂದೇ ಆಗಿ ಮೂರು ಬೆಕ್ಕಿನ ಮರಿಗಳನ್ನು ಎತ್ತಿ ಹಾಲಿನ ಹತ್ತಿರ ಬಿಡುತ್ತಾಳೆ.

## ಕ್ಷಯವರ್ಧನ

ಸರ್ವಜಯಾ, ಮುಖರ್ಜಿಯ ಮನೆಯ ಹೊರ ಪಾಗಾರದ ಭರ್ಜರಿ ಕಮಾನು ಬಾಗಿ ಲನ್ನು ದಾಟಿ ಹೋಗುತ್ತಿದ್ದಾಳೆ. ಮೇಲೆ ತಾರಸಿಯಲ್ಲಿ ಒಗೆದ ಬಟ್ಟೆಗಳನ್ನು ಹರವು ತ್ತಿರುವ ಶೇಜ್‌ಬೌ, ತನ್ನಷ್ಟಕ್ಕೇ ಎನ್ನುವಂತೆ ದೊಡ್ಡದಾಗಿ ಗೊಣಗುತ್ತಿದ್ದಾಳೆ.

ಶೇಜ್‌ಬೌ— ಬೇಲಿ ಹಾಕಿಸ್ಬೇಕಂತ ಅವನಿಗೆ ಹೇಳ್ತಾನೇ ಬಂದೆ. ಮನೇಗೆ ಒಂದಾದರೂ ಹಣ್ಣು ತರಬೇಕು ಅಂತಿದ್ರೆ ಬೇಲಿ ಹಾಕಿಸ್ಬೇಕು ........ಅಲ್ಲ, ಈ ಊರಲ್ಲಿ ಹೇಳಿಕೇಳೋರೇ ಇಲ್ಲಲ್ಲ !

ಹೆಂಗಸಿನ ದನಿ (ಹೊರಗಿಂದ)— ಏನಾಯ್ತು ?

ಈ ತಾರಸಿಗೆ ಎದುರಾಗಿರುವ ಎದುರು ಮನೆಯ ತಾರಸಿಯಲ್ಲಿ ಬಟ್ಟೆ ಹರವುತ್ತಿರುವ ಹೆಂಗಸು ಕಾಣಿಸಿಕೊಳ್ಳುತ್ತಾಳೆ.

ಶೇಜ್‌ಬೌ— ಅಲ್ಲ, ಆ ಹರಿಹರನ ಮಗಳು, ಗಿಡದಲ್ಲಿ ಒಂದೇ ಒಂದು ಹಣ್ಣು ಇರೋಕೂ ಬಿಡೋಲ್ಲ. ಅಲ್ಲೇ ನೋಡ್ತಾ ಕೂತ್ರೆ ಆದೀತು. ಒಂದು ಕ್ಷಣ ಈ ಕಡೆ ತಿರುಗಿದ್ರೆ, ಮತ್ತೆ, ಹಣ್ಣು ಮಾಯವಾಗಿರತ್ತೆ. ಮೂರುಹೊತ್ತೂ ಈ ಗಿಡಗಳನ್ನು ಕಾಯ್ತಾ ಕೂತಿರಲಾ ?

ಹೆಂಗಸು— ಅವಳೀಗೆ ಹೇಳ್ಬೇಕು.

ಶೇಜ್‌ಬೌ— ಯಾರಿಗೆ ಹೇಳೋದು ? ಹೇಳಿದ್ರೆ ಕೇಳೋರ್‍ಯಾರು ? ಅವಳೇನು ನನ್ನ ಮಗಳಾ ? ಅವಳ ತಾಯಿಗೇ ಯೋಚ್ನೆ ಇಲ್ಲಂತೆ, ನಾವು ಹೇಳಿದ್ರೆ ಏನು ಪ್ರಯೋಜನ ? ಇನ್ನೊಂದು ಸ್ವಲ್ಪ ದಿನ ಹೋದ್ರೆ, ಊರೆಲ್ಲ ಹಬ್ಬಿಕೊಳ್ಳುತ್ತೆ, ಆಗ ತಿಳಿಯುತ್ತೆ. ಇದು ಮನೇಲಿ ಕೊಡೋ ಶಿಕ್ಷಣ! ಮನೇಲಿ ಏನು ಕಲಿಸ್ತಾರೆ ಅದನ್ನ ಮಕ್ಕಳು ಕಲಿ ತುಕೋತವೆ.

ಶೇಜ್‌ಬೌ ಮಾತನಾಡುತ್ತಲೇ ತಾರಸಿಯ ಅಂಚಿಗೆ ಹೋಗಿ, ಕೆಳಗೆ ಬಾವಿಯಲ್ಲಿ ನೀರು ಸೇದುತ್ತಿರುವ ಸರ್ವಜಯಾಳ ಕಡೆ ನೋಡುತ್ತಾಳೆ. ತನ್ನ ಧ್ವನಿ ಎತ್ತರಿಸಿ ಅದರ ಪರಿಣಾಮವನ್ನು ಗಮನಿಸುತ್ತಾಳೆ. ಈಕೆಯ ಚುಚ್ಚು ಮಾತುಗಳು ಮೇಲಿನಿಂದ ಅಪ್ಪಳಿಸಿದಂತೆ ಸರ್ವಜಯಾಳ ಮುಖದಲ್ಲಿ ಅಡಗಿಸಲಾಗದ ಆತಂಕ ಕಾಣಿಸುತ್ತಿದೆ. ಅಷ್ಟರಲ್ಲಿ ನೀಲಮಣಿಯ ಪತ್ನಿ ಬಾವಿಯ ಬಳಿ ಬಂದಿದ್ದಾಳೆ. ಈ ಚುಚ್ಚು ಮಾತುಗಳು ಆಕೆಗೂ ಕೇಳಿವೆ. ಆಕೆ ಸರ್ವಜಯಾಳ ಬಳಿ ನಿಂತು ಮೃದುವಾಗಿ ಮಾತಾಡಿಸುತ್ತಾಳೆ.

ನೀ. ಪತ್ನಿ— ಕೊಡ ಅಲ್ಲೀತನಕ ತಂದುಕೊಡಲಾ ?

ಸರ್ವಜಯಾ— ಬೇಡ.

ನೀ. ಪತ್ನಿ— ಯಾಕೆ ? ತಂದುಕೊಡ್ತೀನೆ. ನಿಂಗೆ ಹೊತ್ತುಕೊಂಡು ಹೋಗೋಕೆ ಆಗತ್ತಾ ?

ಸರ್ವಜಯಾ— ಆಗತ್ತೆ.

ಸರ್ವಜಯಾ, ಹಗ್ಗ ಮತ್ತು ಬಕೆಟ್‌ಗಳನ್ನು ಹಿಡಿದುಕೊಂಡು ಅಲ್ಲಿಂದ ಹೊರಡುತ್ತಾಳೆ. ನೀಲಮಣಿಯ ಪತ್ನಿ ಅಲ್ಲೇ ನಿಂತಿದ್ದಾಳೆ. ಬೇಸರಗೊಂಡು ಒಮ್ಮೆ ತಾರಸಿಯತ್ತ ಕಣ್ಣು ಹಾಯಿಸುತ್ತಾಳೆ.

## ಕ್ಷಯುವರ್ಧನ

ಮುದುಕಿ, ಚಾವಡಿಯಲ್ಲಿ ಕೂತು ಕೈಯಲ್ಲಿ ತಟ್ಟೆ ಹಿಡಿದು ಹುರಿಹಿಟ್ಟು ಕಲಸಿ ತಿನ್ನುತ್ತಿದ್ದಾಳೆ. ಹಿಂದೆ, ದುರ್ಗಾ ನಿರೀಕ್ಷಿಸುತ್ತ ಕೂತಿರುವುದನ್ನು ಆಕೆ ಕಂಡಿಲ್ಲ. ತಿಂದು ಮುಗಿಸಿ, ಬೆರಳುಗಳನ್ನು ನೆಕ್ಕಿಕೊಂಡು ತಿರುಗಿದಾಗ, ದುರ್ಗಾ ಕೂತಿರುವುದು ಕಾಣುತ್ತದೆ.

ಮುದುಕಿ—ಓ, ನಿಂಗೆ ಏನೂ ಉಳಿದೇ ಇಲ್ಲ. ಸ್ವಲ್ಪ ನಿಲ್ಲು....

ಮುದುಕಿ, ಮೆಲುನಕ್ಕು ತಿರುಗಿ ಅಲ್ಲೇ ಇರುವ ಮಣ್ಣಿನ ಮಡಕೆಗೆ ಕೈಹಾಕಿ ಬಾಳೆ ಹಣ್ಣಿನ ಚಿಪ್ಪನ್ನು ಎತ್ತಿ ನೋಡುವಾಗ, ಅದರ ಕೆಳಗೆ ಪೇರಲಹಣ್ಣಿರುವುದು ಕಾಣುತ್ತದೆ. ದುರ್ಗಾ ಮೆಲುನಗುತ್ತಾಳೆ. ಆಕೆ ಹಣ್ಣನ್ನೆತ್ತಿ ತನ್ನ ಕುರುಡುಗಣ್ಣುಗಳಿಗೆ ಹತ್ತಿರ ಹಿಡಿದು ಪರೀಕ್ಷಿಸುತ್ತಿರುವಾಗ, ಸರ್ವಜಯಾ ಚಾವಡಿಗೆ ಬಂದು, ಸುತ್ತ

ನೋಡಿ ದುರ್ಗಾಳನ್ನು ಕರೆಯುತ್ತಾಳೆ. ದುರ್ಗಾ ಮುದುಕಿಯ ಜೊತೆ ಇರುವುದನ್ನು ಕಾಣುತ್ತಾಳೆ.

ಸರ್ವಜಯಾ —ಇಲ್ಲಿ ಬಾ.

ಮುದುಕಿ— ಅವಳೇನೂ ಮಾಡೋಲ್ಲ, ಇರಲಿ.

ಸರ್ವಜಯಾ— ನೀವು ತಿನ್ನತಾ ಇರಬೇಕಾದ್ರೆ ಅವಳು ಯಾಕೆ ಅಲ್ಲಿ ಕೂತ್ಕೋಬೇಕು ? ........ಇಲ್ಲಿ ಬಾ.

ಮುದುಕಿ— (ದುರ್ಗಾಗೆ) ಹೋಗು, ಒಳ್ಳೇ ಹುಡುಗಿ. ಅಮ್ಮ ಕರೀತಿದಾಳೆ, ಹೋಗು.

ದುರ್ಗಾ ಅಲ್ಲಿಂದ ಎದ್ದು ತಾಯಿಯ ಕಡೆ ಹೋಗುತ್ತಾಳೆ.

ಸರ್ವಜಯಾ— ಶೇಜೋ ದೊಡ್ಡಮ್ಮನ ತೋಟದಿಂದ ಏನು ತಗೊಂಡು ಬಂದೆ ?........ ಅದೇನು ನಿನ್ನ ಸೆರಗಿನಲ್ಲಿರೋದು, ತೆಗಿ ಹೊರಗೆ.

ದುರ್ಗಾ ಅಳುಕುತ್ತ ಪೇರಲ ಹಣ್ಣುಗಳನ್ನು ಹೊರತೆಗೆದು ತೋರಿಸುತ್ತಾಳೆ. ಮುದುಕಿ ನಗುತ್ತ ಆ ಕಡೆ ನೋಡುತ್ತಿದ್ದಾಳೆ.

ಸರ್ವಜಯಾ— ಹಿಂದಕ್ಕೆ ಹೋಗಿ ಅದನ್ನ ಶೇಜೋ ದೊಡ್ಡಮ್ಮನಿಗೆ ಕೊಟ್ಟು ಬಾ. ಕೊಟ್ಟು ಬಂದಮೇಲೆ ಅಂಗಳದ ಕಸ ಗುಡಿಸು.

ದುರ್ಗಾ ಅಲ್ಲಿಂದ ಹೊರಡುತ್ತಾಳೆ.

## ಕ್ಷಯವರ್ಧನ

ಅಂಗಳದಲ್ಲಿ ಮುದುಕಿ ಮುಖ ತೊಳೆದುಕೊಳ್ಳುತ್ತಿದ್ದಾಳೆ. ಹಿನ್ನೆಲೆಯಲ್ಲಿ ದುರ್ಗಾ ಚಲಿಸುತ್ತಿದ್ದಾಳೆ. ಮುದುಕಿ ತಿರುಗುತ್ತಾಳೆ; ತನ್ನ ಚಿಕ್ಕ ಲಿಂಬೆ ಸಸಿಗೆ ನೀರು ಚಿಮುಕಿಸುತ್ತಾಳೆ. ಅಲ್ಲಿಂದ ನಡು ಅಂಗಳಕ್ಕೆ ಹೋಗುತ್ತಾಳೆ. ಸರ್ವಜಯಾ ಕಟ್ಟೆಯ ಮೇಲೆ ಕೂತು ಆಕೆಯನ್ನೇ ನೋಡುತ್ತಿದ್ದಾಳೆ. ಮುದುಕಿ, ತನ್ನ ಛಾದರ ಕೊಡವಿ ದೂಳೆಬ್ಬಿಸಿದಾಗ ಸರ್ವಜಯಾ ಕಿರಿಕಿರಿಯಾಗುವಂತೆ ಮುಖ ಸಿಂಡರಿಸುತ್ತಾಳೆ.

ಸರ್ವಜಯಾ— ಅಜ್ಜಿ, ಆ ಹುಡುಗೀನ ಹಾಳು ಮಾಡ್ತೀರಿ, ಅಷ್ಟೆ.

ಮುದುಕಿ— ಏನಾಯ್ತು ಈಗ ?

ಸರ್ವಜಯಾ— ಏನಾಯ್ತು ಅಂತ ಹೆಳ್ಬೇಕಾ ? ಆ ಹಣ್ಣುಗಳನ್ನೆಲ್ಲಾ ಯಾರು ಮುಚ್ಚಿಟ್ಟುಕೊಳ್ಳೋದು ?

ಮುದುಕಿ— ಯಾವ ಹಣ್ಣು ?

ಸರ್ವಜಯಾ— ದುರ್ಗಾ ನಿಮಗಾಗಿ ಕದ್ದು ತರ್ತ್ತಾಳಲ್ಲ........ ನಿಮಗೆ ಗೊತ್ತಿಲ್ವಾ ?

ಮುದುಕಿ, ಛಾದರವನ್ನೆತ್ತಿಕೊಂಡು ಹಿಂತಿರುಗಿ ನಡೆಯುತ್ತಾಳೆ.

ಮುದುಕಿ— ಪಾಪ, ಅದಿನ್ನೂ ಮಗು.

ಸರ್ವಜಯಾ— ಅವಳೇನೋ ಮಗು, ಸರೀನೆ. ಆದರೆ, ನೀವ್ಯಾಕೆ ಹೀಗೆ ಹುಡುಗಾಟಿಕೆ ಮಾಡೋದು ? ನಿಮಗ ತಿಳಿವಳಿಕೆ ಇಲ್ವಾ ? ಏನೋ ಇರಲಿ ಅಂತ ನಿಮ್ಮನ್ನ ಇಲ್ಲಿ ಇಟ್ಟುಕೊಂಡಿದ್ದಕ್ಕೆ ನಮ್ಮ ತಲೇನೇ ಹತ್ಕೋತೀರಿ. ನಂಗೆ ನಿಮದೆಲ್ಲಾ ಗೊತ್ತು.

ಮುದುಕಿ— ಏನೇನೋ ಮನಸ್ಸಿಗೆ ಬಂದಿದ್ದು ಮಾತಾಡ್ತೀಯಪ್ಪ, ನಂಗೆ ತಿಳಿಯೋದಿಲ್ಲ.

ಸರ್ವಜಯಾ— ನಿಮಗೆ ಏನೂ ತಿಳಿಯೋಲ್ಲ ! ನೀವು ಅಡುಗೆಮನೆ ಯಿಂದ ಎಣ್ಣೆ ಉಪ್ಪು ಮೆಣಸಿನಕಾಯಿ ಅಂತ, ಕದ್ದುಕೊಂಡು ಹೋಗೋದು ಸುಳ್ಳಾ ? ನಿಮ್ಮ ಪೆಟ್ಟಿಗೆ ತಗೆದು ತೋರಿಸಲಾ ? ಯಾಕೆ ಮಾತಾಡೋದಿಲ್ಲ ? ಹೇಳಿ........

ಮುದುಕಿ ಈಗ ತನ್ನ ಚಾವಡಿಯನ್ನೇರಿದ್ದಾಳೆ. ಸರ್ವಜಯಾ ಮಾತಾಡುತ್ತಿರುವಂತೆ ತನ್ನ ಕೋಣೆಯ ಕಡೆ ಹೋಗುತ್ತಾಳೆ.

ಸರ್ವಜಯಾ— ಇದೆಲ್ಲಾ ನಡೆಯೋಲ್ಲ. ನೋಡಿ, ಹೇಳ್ತೀನೆ- ನೀವು ಮುಂದೂ ಹೀಗೇ ಮಾಡೋದಾದ್ರೆ, ಬೇರೆ ಯಾವುದಾದ್ರೂ ಜಾಗ ನೋಡ್ಕೊಳ್ಳಿ. ಒಂದಲ್ಲ ಎರಡಲ್ಲ, ಎಂಟು ವರ್ಷದಿಂದ ಸಹಿಸೀ ಸಹಿಸಿ ನಂಗೂ ಸಾಕಾಗಿದೆ........ ನನ್ನ ಮಗಳನ್ನ ಹಾಳು ಮಾಡಿದ್ತೀರಿ. ಸುತ್ತ ಇರೋರಿಂದ ನಾನು ದೂರು ಕೇಳ್ಬೇಕು. ಇನ್ನು ನಾ ಸುಮ್ಮ ನಿರೋಲ್ಲ.

ಮುದುಕಿ ತನ್ನ ಕೋಣೆಗೆ ಪ್ರವೇಶಿಸಿ ಅರಿವೆ ಅಂಚಡಿಗಳನ್ನು ಗಂಟುಕಟ್ಟತೊಡಗು ತ್ತಾಳೆ.

ಕ್ಷಯುವರ್ಧನ

ಮುದುಕಿ ತನ್ನ ಕೋಣೆಯಿಂದ ಎಸೆದ ಒಂದು ಅರಿವೆ ಗಂಟು, ಅಂಗಳದಲ್ಲಿ ಮಲಗಿ ಕೊಂಡಿರುವ ಒಂದು ಬೆಕ್ಕಿನಮೇಲೆ ಬಂದು ಅಪ್ಪಳಿಸಿ ಬೀಳುತ್ತದೆ. ಮುದುಕಿ ಗೊಣ ಗುತ್ತ ಹೊರಕ್ಕೆ ಬರುತ್ತಾಳೆ.

ಮುದುಕಿ— ಈ ಮುದಿ ವಯಸ್ಸಲ್ಲಿ ಏನೇನು ಅನುಭವಿಸ್ಬೇಕೋ.

ಮುದುಕಿ ಕೋಪದಿಂದ ಗಂಟನ್ನೆತ್ತಿಕೊಂಡು, ಮಲಗಿರುವ ಬೆಕ್ಕನ್ನು ಎತ್ತಿ ಬದಿಗೆ ಸೆದು, ತನ್ನ ಹಿತ್ತಾಳೆ ಬಿಂದಿಗೆಯನ್ನು ಕೈಯಲ್ಲೆತ್ತಿಕೊಂಡು ಬಾಗಿಲ ಕಡೆ ನಡೆಯು ತ್ತಾಳೆ. ಸರ್ವಜಯಾ ಆಕೆಯ ಕಡೆಗೇ ನೋಡುತ್ತಿದ್ದಾಳೆ.

ಸರ್ವಜಯಾ— ಅಜ್ಜಿ, ಎಲ್ಲಿಗೆ ಹೋಗ್ತೀರಿ ?

ಮುದುಕಿ ಆಕೆಯ ಮಾತಿಗೆ ಕಿವಿಗೊಡದೆ ಮನೆಯಿಂದ ಹೊರಕ್ಕೆ ನಡೆಯುತ್ತಾಳೆ.

ಈಗ ಶೇಜ್‌ಬೌ ಮನೆಯ ಕಡೆಯಿಂದ ಮನೆಗೆ ಬರುತ್ತಿರುವ ದುರ್ಗಾ, ಮುದುಕಿ ಹೋಗುತ್ತಿರುವುದನ್ನು ನೋಡುತ್ತಾಳೆ. ಆಕೆಯನ್ನು ಕೂಗುತ್ತಾಳೆ. ಅವಳ ಬಳಿ ಓಡಿ ಹೋಗಿ ಹಿಂದಿರುಗುವಂತೆ ಅವಳನ್ನು ಒತ್ತಾಯಿಸುತ್ತಾಳೆ. ದುರ್ಗಾ ಮುದುಕಿಯನ್ನು ಕೂಗಿದ್ದು ಕೇಳಿ ಸರ್ವಜಯಾ ಎದ್ದು ಮುಂದೆ ಹೋಗಿ ಆ ಕಡೆ ನೋಡುತ್ತಾಳೆ.

ಸರ್ವಜಯಾ— ದುರ್ಗಾ, ಬಾ ಹಿಂದಕ್ಕೆ.

ದುರ್ಗಾ ಅಲ್ಲೇ ಇದ್ದಾಳೆ. ಮುದುಕಿಯನ್ನು ಬಿಡದೆ ಅವಳ ಗಂಟನ್ನು ಹಿಡಿದಿದ್ದಾಳೆ, ಜಗ್ಗುತ್ತಿದ್ದಾಳೆ. ಆಮೇಲೆ, ತಾಯಿ ಕರೆದದ್ದು ಕೇಳಿ ತಿರುಗಿ ಓಡುತ್ತ ಬಂದು ಅಂಗಳ ದೊಳಗೆ ಪ್ರವೇಶಿಸುತ್ತಾಳೆ.

ಸರ್ವಜಯಾ— ಹಿಂದಕ್ಕೆ ಕೊಟ್ಟು ಬಂದೆಯಾ?.... ನಾ ಏನು ಹೇಳಿದ್ದೆ, ನಿನಗೆ ?

ದುರ್ಗಾ ಕಸಬರಿಗೆಯನ್ನೆತ್ತಿಕೊಂಡು ಅಂಗಳವನ್ನು ಗುಡಿಸಲು ತೊಡಗುತ್ತಾಳೆ.

(೨)

ಕ್ಷಯುವರ್ಧನ

ರಾತ್ರಿ. ದುರ್ಗಾ ಹಾಸಿಗೆಯ ಮೇಲೆ ಮಲಗಿ ನಿದ್ರಿಸುತ್ತಿದ್ದಾಳೆ. ಅಡುಗೆ ಕೋಣೆಯ ಹೊರಭಾಗದಲ್ಲಿ ಹರಿಹರ ತವಕದಿಂದ ಶತಪಥ ಹಾಕುತ್ತಿದ್ದಾನೆ. ಎದುರು ಅಂಗಳದಲ್ಲಿ, ಒಂದು ಚಿಕ್ಕ ಗುಡಿಸಲಿನಿಂದ ಬೆಳಕು ತೂರಿ ಬರುತ್ತಿದೆ. ಹರಿಹರ ಆ ಕಡೆಗೇ ನೋಡು ತ್ತಿದ್ದಾನೆ.

ಆ ಗುಡಿಸಲಲ್ಲೇ ಸರ್ವಜಯಾ ನೋವಿನಿಂದ ನರಳುತ್ತ ಮಲಗಿದ್ದಾಳೆ. ಬದಿಯಲ್ಲಿ, ನೀಲಮಣಿಯ ಪತ್ನಿ ಆತಂಕಗೊಂಡು ನೋಡುತ್ತಿದ್ದಾಳೆ; ಶೇಜ್‌ಬೌ ನಿರ್ಭಾವದಿಂದ ಕೂತಿದ್ದಾಳೆ.

ಹರಿಹರ ತನ್ನ ಶತಪಥ ಹಾಗೇ ಮುಂದುವರಿಸಿದ್ದಾನೆ. ಸರ್ವಜಯಾಳ ನರಳಿಕೆ ಹೆಚ್ಚುತ್ತಿದೆ.

ಕ್ಷಯುವರ್ಧನ

ಹಗಲು. ಮನೆಯ ಹೊರಭಾಗದ ಕಾಲುದಾರಿಯಲ್ಲಿ ದುರ್ಗಾ, ಮುದುಕಿಯ ಕೈಹಿಡಿದು ಕೊಂಡು, ಹಾರುತ್ತ ಹಾರುತ್ತ, ಮನೆಯ ಕಡೆ ಕರೆತರುತ್ತಿದ್ದಾಳೆ. ಕಂಕುಳಲ್ಲಿ ಕೊಡ ವಿಟ್ಟುಕೊಂಡು ಹೊರಟ ಹೆಂಗಸೊಬ್ಬಳು ಎದುರು ಬರುತ್ತಾಳೆ. ಇವರನ್ನು ಕಂಡು ಮೆಲುನಗುತ್ತಾಳೆ.

ಹೆಂಗಸು— ಅಜ್ಜಿ, ಇಷ್ಟು ದಿನ ಎಲ್ಲಿದ್ದೆ ?

ಮುದುಕಿ— ರಾಜು ಮನೇಲಿದ್ದೆ. ಇವತ್ತು ಬೆಳಿಗ್ಗೆ ಶೈಲಾ ಹೇಳಿದ್ಲು —ನಮ್ಮ ಹರೀಗೆ........ —ಅದಕ್ಕೆ, ನಾನೇ ಬರೋಣಾಂತ ಹೊರ ಟಿದ್ದೆ. ಅಷ್ಟರಲ್ಲಿ ಇವಳು ಬಂದ್ಲು—ನನ್ನ ಕರಕೊಂಡು ಬರೋಕೆ ಅಂತ........ ಇಬ್ರೂ ರಸ್ತೆಮೇಲೆ ಸೇರಿಕೊಂಡೆವು.

ಮನೆಯ ಒಳಗೆ. ನೀಲಮಣಿಯ ಪತ್ನಿ ಹೊರಗಿಂದ ಈ ಮಾತುಗಳನ್ನು ಕೇಳಿ ಮೆಲು ನಗುತ್ತಾಳೆ.

ಹೆಂಗಸು— ಒಳಗೆ ಹೋಗಿ ನೋಡು, ತಮ್ಮನಿಗೆ ಎಂಥಾ ಚೂಟಿ ಮಗ ಹುಟ್ಟಿದಾನೆ ಅಂತ.

ಮುದುಕಿ ಮತ್ತು ದುರ್ಗಾ ಮನೆಯ ಚಾವಡಿಯನ್ನು ಪ್ರವೇಶಿಸುತ್ತಿದ್ದಾರೆ. ಮುದುಕಿ ಅಲ್ಲಿಂದಲೇ ದೊಡ್ಡದಾಗಿ ಮಗುವನ್ನು ಕೂಗಿಕೊಳ್ಳುತ್ತ ಬರುತ್ತಿದ್ದಾಳೆ. ಹಲವರು ಹೆಂಗಸರು ಎದುರಾಗುತ್ತಾರೆ.

ಒಬ್ಬ ಹೆಂಗಸು— ಅಜ್ಜಿ, ಅಂತೂ ಎಷ್ಟೋ ದಿನ ಆದಮೇಲೆ ಬಂದು ಬಿಟ್ಟೆಯಲ್ಲ.

ಮುದುಕಿ ಅತ್ತ ಗಮನ ಕೊಡದೆ ಗುಡಿಸಲಕಡೆ ಧಾವಿಸುತ್ತಾಳೆ. ದುರ್ಗಾ ಆಕೆಯ ಗಂಟನ್ನು ಹೊತ್ತುಕೊಂಡು ಹೋಗಿ ಅವಳ ಹಳೆಯ ಕೋಣೆಯಲ್ಲಿಡುತ್ತಾಳೆ.

ಮುದುಕಿ ಗುಡಿಸಲು ಒಳಹೊಕ್ಕು ತಾಯಿ-ಮಗುವನ್ನು ಇಣುಕಿ ನೋಡುತ್ತಿದ್ದಾಳೆ.

ಮುದುಕಿ— ಮಗುವಿನ ಮುಖದ ಮೇಲಿರೋ ಬಟ್ಟೆ ಸರಿಸ್ತೀಯಾ ? ಮುಖ ನೋಡ್ತೇನೆ. (ತಾಯಿ ಹಾಗೆ ಮಾಡಿದ ಮೇಲೆ) ಎಷ್ಟು ಮುದ್ದಾಗಿದೆಯೆ ಮಗು !

ಈಗ ದುರ್ಗಾ ಅಲ್ಲಿ ಬಾಗಿಲ ಬಳಿ ಬಂದಿದ್ದಾಳೆ. ಮುದುಕಿ ಮತ್ತು ದುರ್ಗಾ ಇಬ್ಬರೂ ಒಟ್ಟಿಗೆ ಮಗುವನ್ನು ನೋಡಿ ಮೆಲುನಗುತ್ತಾರೆ. ಮುದುಕಿ ಇದ್ದಕ್ಕಿದ್ದಂತೆ ಕುಸಿದು ಕೂರುತ್ತಾಳೆ.

ಕ್ಷೀಣನ

(೩)

ಮುದುಕಿ ಕೂತು, ತೊಟ್ಟಿಲಲ್ಲಿರುವ ಮಗುವನ್ನು ತೂಗುತ್ತ ಜೋಗುಳ ಹಾಡುತ್ತಿದ್ದಾಳೆ. ದುರ್ಗಾ, ತನ್ನ ಹುಣಿಸೆ ಬೀಜಗಳನ್ನು ಎಣಿಸುತ್ತ ಆಟದಲ್ಲಿ ಮಗ್ನಳಾಗಿದ್ದಾಳೆ. ಸರ್ವಜಯಾ ಅಡುಗೆಮನೆಯಲ್ಲಿ, ಹೊಗೆಯಲ್ಲಿ ಆತಂಕಪಟ್ಟುಕೊಳ್ಳುತ್ತ ಅಡುಗೆ ಮಾಡತೊಡಗಿದ್ದಾಳೆ.

ಹರಿಹರ ಅಡುಗೆಮನೆಗೆ ಪ್ರವೇಶಿಸಿ, ತನ್ನ ಹುಕ್ಕಾವನ್ನು ಕೆಂಡ ತುಂಬಿಕೊಡಲಿಕ್ಕಾಗಿ

ಹೆಂಡತಿಗೆ ಕೊಡುತ್ತಾನೆ.

ಹರಿಹರ— ಏನು, ಅಡುಗೆ ಮ್ಹಾಡ್ತಿದೀಯಾ ?

ಸರ್ವಜಯಾ— ಕಾಣೋದಿಲ್ವಾ ? ಪುಲಾವ್, ಕೊರ್ಮಾ, ಕಲಿಯಾ ............ ಎಲ್ಲಾ.

ಹರಿಹರ ಮುದಗೊಂಡು ಬಾಗಿಲಲ್ಲಿ ಕೂರುತ್ತಾನೆ.

ಹರಿಹರ— ಅಲ್ಲ, ಯಾವಾಗಲಾದ್ರೂ ಅವನ್ನೆಲ್ಲ ಮಾಡಬಾರ್ದಾ ? ಅದೆಲ್ಲಾ ಮಾಡೋದೇ ಮರೆತುಹೋಗಿದೆಯೋ ಏನೋ ನಿನಗೆ.

ಸರ್ವಜಯಾ— ಮರೆತುಹೋಗಿದೆ.

ಹರಿಹರ— ಅಲ್ಲ, ನಮ್ಮ ಮಗುವಿನ ಅನ್ನಪ್ರಾಶನ ಸಮಾರಂಭ ಮಾಡಬೇಕಲ್ಲ.

ಸರ್ವಜಯಾ— ಹೋ, ಮಾಡದೆ ಏನಂತೆ ? ನೀವು ಎಲ್ಲಾ ಮಾಡ್ತೀರಿ.

ಹರಿಹರ— ಯಾಕೆ ? ರಾಯ್ ದೊಡ್ಡಪ್ಪನವರ ಮನೇಲಿ ಮುಂದಿನ ತಿಂಗಳಿಂದ ನನಗೆ ಒಂದು ಕೆಲ್ಸ ಸಿಕ್ಕತ್ತೆ. ಇವತ್ತು ಹೇಳಿದ್ರು—ಅವರು ಹಾಗಂತ ಮಾತು ಕೊಟ್ಟಿದಾರಂತೆ.

ಸರ್ವಜಯಾ— ಸಂಬಳದ ಬಗ್ಗೆ ಏನಾದ್ರೂ ಹೇಳಿದರಾ ?

ಹರಿಹರ— ಅದರ ಬಗ್ಗೆ ನಾ ಯೋಚ್ನೆ ಮಾಡೋದಿಲ್ಲ. ಹೇಗಾದ್ರೂ, ನಾನೇನು ಅಲ್ಲಿ ಖಾಯಂ ಕೆಲಸಕ್ಕೆ ನಿಲ್ಲೋನಲ್ಲ. ಹಾಗೆ ಖಾಯಂ ಅಂದ್ರೆ. ರಾಯ್ ದೊಡ್ಡಪ್ಪ ನನ್ನನ್ನ ಗುಲಾಮನಾಗಿ ಮಾಡಿಬಿಟ್ಟಾನು. ಸದ್ಯಕ್ಕೆ ಇದೊಂದು ಕೆಲಸ, ಕೆಲವು ಶಿಷ್ಯವರ್ಗ ಇಷ್ಟು ಇದ್ರೆ, ಹೇಗೋ ಸಂಸಾರ ಸಾಗಿಸಬಹುದು. ಆಮೇಲೆ ಏನಾಗತ್ತೋ, ಕಾಲವೇ ದಾರಿ ಕಾಣಿಸತ್ತೆ.

ಸರ್ವಜಯಾ— ಜನವರಿಯಲ್ಲಿ ಮಗು ಹುಟ್ಟಿದ್ದು. ಈಗ, ಮೇನಲ್ಲಿ ನಿಮಗೆ ಕೆಲಸ ಸಿಕ್ತು. ಏನೋ ಎಲ್ಲ ಒಳ್ಳೇದಕ್ಕೇ........

ಹರಿಹರ— ಅದಕ್ಕೇ ನನಗೆ, ಈ ಅನ್ನಪ್ರಾಶನ ಸಮಾರಂಭ ಮಾಡಿಬಿಡೋಣ ಅಂತ. ಖರ್ಜೇನೋ ಆಗತ್ತೆ. ಆದರೆ ಅದು ನಮ್ಮ ಗೌರವದ ಪ್ರಶ್ನೆ. ಊರಿನೋರು ರುಚಿರುಚಿಯಾದ ನಿನ್ನ ಕೈ ಅಡುಗೆ ಊಟ ಮಾಡಲಿ. ಅಂ ?........ ಒಳ್ಳೇ ಭರ್ಜರಿ ಆಗತ್ತೆ.

ಸರ್ವಜಯಾ— ಇಲ್ಲಿ ಕೇಳಿ, ಅವರು ನಿಮಗೆ ಸರಿಯಾಗಿ ಸಂಬಳ ಕೊಡ್ತಾರಾ ?

ಹರಿಹರ— ಯಾಕೆ ಕೊಡೋಲ್ಲ ? ರಾಯ್ ದೊಡ್ಡಪ್ಪ ಅವರು ಒಳ್ಳೇ ಸಂಭಾವಿತ ಮನುಷ್ಯ.

ಸರ್ವಜಯಾ— ಯಾರು ಸಂಭಾವಿತರೋ ಯಾರು ಅಲ್ಲವೋ, ನಿಮಗಂತೂ ಅದು ಯಾವತ್ತೂ ತಿಳಿಯೋದಿಲ್ಲ. ನಿಮ್ಮ ಒಳ್ಳೇತನದಿಂದ್ಲೇ ನೀವು ಯಾವಾಗ್ಲೂ ತೊಂದ್ರೆಪಟ್ಕೋತೀರಿ. ನಿಮ್ಮ ಒಳ್ಳೇತನಾನ ಎಲ್ಲರೂ ದುರುಪಯೋಗ ಪಡಿಸ್ಕೋತಾರೆ.

ಹರಿಹರ— ಯಾಕೆ, ಅಂಥಾದ್ದೇನಾಯ್ತು ?

ಸರ್ವಜಯಾ— ನಮ್ಮ ಅಂಥಾ ಒಳ್ಳೇ ತೋಟ ಅವರು ಎತ್ತಿ ಹಾಕಿಕೊಳ್ಳಲಿಲ್ವಾ ?

ಹರಿಹರ— ನಮ್ಮ ಅಣ್ಣ ಅವರಿಂದ ಮುನ್ನೂರು ರೂಪಾಯಿ ಸಾಲ ತಗೊಂಡಿರಲಿಲ್ವಾ ? ಅದನ್ನ ತೀರಿಸೋಕೆ ತೋಟ ಮಾರಬೇಕಾಯ್ತು, ಅಷ್ಟೆ.

ಸರ್ವಜಯಾ— ಆ ತೋಟ ಇದ್ದಿದ್ರೆ ನಮಗೆ ಯಾವ ತೊಂದರೇನೂ ಇರ್ತಿರಲಿಲ್ಲ. ಈಗ ಅವರು ಅದೇ ತೋಟದಿಂದ ಬುಟ್ಟಿಬುಟ್ಟಿ ಮಾವಿನ ಹಣ್ಣು ತೆಂಗಿನಕಾಯಿ, ನಮ್ಮ ಹೊಸತಿಲ ಎದುರಿಗೇ ಒಯ್ತಾರಲ್ಲ ! ನಮ್ಮ ದುರ್ಗಾ ಎಲ್ಲೋ ಒಂದು ಪೇರಲ ಹಣ್ಣು ಕೊಯ್ದುಕೊಂಡು ಬಂದ್ರೆ, ಅವಳು ಅಷ್ಟೆಲ್ಲ ಕಿರುಚ್ತಾಳೆ.

ಹರಿಹರ— ಹೋಗ್ಲಿ ಬಿಡು, ಈಗ ನಮಗೂ ಅವರಿಗೂ ಏನೂ ಸಂಬಂಧ ಉಳಿದಿಲ್ಲಲ್ಲ. ಅವರು ತಮ್ಮ ಲೇವಾದೇವಿ ನಡೆಸಿಕೋತಾರೆ. ನಾನು, ನನ್ನ ಪಾಡಿಗೆ ಅಧ್ಯಯನ ಮಾಡಿಕೋತಾ ಇರತೇನೆ.

ಸರ್ವಜಯಾ— ದೇವರು ಕೈಬಿಟ್ಟಿರೋ ಹಳ್ಳಿ ಇದು. ಇಲ್ಲಿ ನಿಮ್ಮ ಅಧ್ಯಯನ ಯಾರಿಗೆ ಬೇಕಾಗಿದೆ ? ಯಾರು ಕೇಳ್ತಾರೆ.

ಹರಿಹರ— ಸ್ವಲ್ಪ ಕೇಳು, ನನ್ನ ಯೋಜನೆ ಏನು ಅಂತ ಹೇಳ್ತೀನಿ. ಈಗ ನಾ ಬರೆದಿರೋ ಹೊಸಾ ನಾಟಕಗಳು—ಅವುಗಳ ಸುದ್ದಿ ಒಂದು ಸಲ ಹರಡಿತು ಅಂದ್ರೆ, ನಾಟಕ ಕಂಪ್ನಿ ಜನಾ ಎಲ್ಲಾ ನನ್ನ ಬಾಗಿಲಲ್ಲಿ ಮುತ್ತಿಕೋತಾರೆ. ಅಂಥಾ ಹೊಸ ನಾಟಕಗಳು ಅವರಿಗೆ ಎಲ್ಲಿ ಸಿಗತ್ತೆ ? ಮರದ ಮೇಲೆ ಬೆಳೆಯೋದಲ್ಲ ಅವು. ಈಗ, ಹೊಸತಾಗಿ ಬರೀತೇನೆ

ಅನ್ನೋರೆಲ್ಲಾ ನಂಗೆ ಗೊತ್ತು. ಅದೇ ಹಳೇ ಚರ್ವಿತ ಚರ್ವಣ ಬರೀ ತಾರೆ. ಅಂಥಾ ನಾಟಕಗಳೇ ನಡೆಯುತ್ತೆ ಅಂದಾಗ, ಈ ನಿಶ್ಚಿಂದಿಪುರದ ಹರಿಹರ ರಾಯ್ ಬರೆಯೋ ಸ್ವತಂತ್ರ ನೂತನ ಕೃತಿಗಳು ಯಾಕೆ ಮೆಚ್ಚಿಕೆ ಆಗೋಲ್ಲ ?

ಸರ್ವಜಯಾ— ನಿಮಗೆ ವಿದ್ಯೆ ಇದೆ. ಊರವರೆಲ್ಲಾ ನಿಮಗೆ ಗೌರವ ಕೊಡ್ತಾರೆ ಅಂತ ಆದ್ರೆ, ಅದಕ್ಕಿಂತ ಮತ್ತೇನು ಬೇಕು ? ಮಗು ವಿದ್ಯೆ ಕಲೀತಾನೆ. ದುರ್ಗಾಗೂ ಒಳ್ಳೇ ವರಾನೇ ಸಿಗಬಹುದು. ನಮಗೆ— ದಿನಕ್ಕೆ ಎರಡು ಊಟ, ವರ್ಷಕ್ಕೆ ಎರಡು ಸೀರೆ, ಅದಕ್ಕಿಂತ ಇನ್ನೇನು ಬೇಕು ?

ಹರಿಹರ— ಎಲ್ಲಾ ಆಗತ್ತೆ. ನಮ್ಮ ಹಿಂದಿನವರು ತಾಳೆಗರಿಯಲ್ಲಿ ಅಷ್ಟೆಲ್ಲಾ ರಾಶಿರಾಶಿ ಬರೆದು ಹಾಕಿದಾರಲ್ಲಾ, ಅದೇನು ನಿಷ್ಫಲವಾಗಿ ಬಿಡತ್ತಾ ? ಮನೆತನದ ಸಂಪ್ರದಾಯ ನಷ್ಟವಾಗಬಾರ್ದು........ ಏನೋ ಒಂದೆರಡು ವರ್ಷ ಕಾಯಬೇಕಾಗತ್ತೆ. ಸಾಲ ಎಲ್ಲಾ ತೀರಿಸಿಬಿಡ್ತೇನೆ, ಮನೆ ರಿಪೇರಿ ಮಾಡಿಸ್ತೇನೆ. ಆಮೇಲೆ, ನೀನು ಹೀಗೆ ದಿನಾ ಅದೇ ತರಕಾರೀನೇ ಬೇಯಿಸ್ತಾ ಕೂತ್ಕೋಬೇಕಿಲ್ಲ.

ಈಗ ದುರ್ಗಾ ಪ್ರವೇಶಿಸುತ್ತಾಳೆ. ಬಂದು, ಹರಿಹರ ರಾಯನ ತೊಡೆಯಮೇಲೆ ಕುಳಿತುಕೊಳ್ಳುತ್ತಾಳೆ.

ಹೊರಗೆ— ಮುದುಕಿ ಅಪೂ ಮಲಗಿರುವ ತೊಟ್ಟಿಲನ್ನು ತೂಗುತ್ತ ಲಾಲಿ ಹಾಡುತ್ತಲೇ ಇದ್ದಾಳೆ.

ಕ್ಷೀಣನ

(೪)

ವರ್ಧನ

ಮನೆಯ ಹೊರಭಾಗದಿಂದ ಸರ್ವಜಯಾ, ಕಟ್ಟಿಗೆ ಆರಿಸಿಕೊಂಡು ಬರುತ್ತಿದ್ದಾಳೆ. ಅಲ್ಲೇ ಹೊರಗಿನಿಂದ, ಮಲಗುವ ಕೋಣೆಯ ಕಿಟಕಿಯಲ್ಲಿ ಇಣುಕಿ ನೋಡುತ್ತಾಳೆ.

ಸರ್ವಜಯಾ— ಅಪೂ, ಅಪೂ, ಏಳೋದಿಲ್ವಾ? ಶಾಲೆಗೆ ಹೋಗೋ ಲ್ವಾ? ಏಳು ಮುದ್ದು, ಏಳು.

ಆಕೆ ಅಲ್ಲಿಂದಲೇ ಕೈಹಾಕಿ ಆತನನ್ನು ಎಬ್ಬಿಸಲು ಯತ್ನಿಸುತ್ತಾಳೆ. ಆತ ಅಲಗುವು ದಿಲ್ಲ. ತಾಯಿ ತಿರುಗಿ ಹೊರಡುತ್ತಾಳೆ.

ಸರ್ವಜಯಾ— ದುರ್ಗಾ, ಹೋಗಿ ಅವನನ್ನ ಎಬ್ಬಿಸು. ಅವನಿನ್ನು ಶಾಲೆಗೆ ಹೋಗ್ಬೇಕು. ಇಷ್ಟು ಹೊತ್ತಾದ್ರೂ ಮಲಗಿದ್ರೆ........

ಹೊರಗೆ— ದುರ್ಗಾ ಒಬ್ಬ ಹೆಂಗಸು ಆಕಳನ್ನು ನಿಲ್ಲಿಸಿಕೊಂಡು ಹಾಲು ಕರೆಯುತ್ತಿರು ವುದನ್ನು ನೋಡುತ್ತಿದ್ದಾಳೆ. ಸರ್ವಜಯಾ ಅಲ್ಲಿಗೆ ಬರುವ ಹೊತ್ತಿಗೆ, ಕೆಲಸದಾಕೆ ಹಾಲು ಕರೆದು ಮುಗಿಸಿದ್ದಾಳೆ.

ಕೆಲಸದಾಕೆ— ಬಿಂದಿಗೆ ತುಂಬಲೇ ಇಲ್ಲ. ಹಸುವಿಗೆ ಸರಿಯಾಗಿ ಮೇವು ಹಾಕ್ತಾ ಇಲ್ಲವೋ........

ದುರ್ಗಾ ಹಾಲಿನ ಪಾತ್ರೆ ಎತ್ತಿಕೊಂಡು ಮನೆಯೊಳಕ್ಕೆ ಹೋಗುತ್ತಾಳೆ. ಅಲ್ಲಿ, ಮುದುಕಿ ತನ್ನ ಛಾದರವನ್ನು ಕೊಡುವುತ್ತಿದ್ದಾಳೆ.

ದುರ್ಗಾ ಹಾಲನ್ನು ಒಳಗಿಟ್ಟು ಮಲಗುವ ಕೋಣೆಗೆ ಹೋಗಿ ಅಪೂನನ್ನು ಎಬ್ಬಿಸಲು ಪ್ರಯತ್ನಿಸುತ್ತಾಳೆ.

ದುರ್ಗಾ— ಏ ಅಪೂ, ಏಳು, ಮೇಲೇಳು.

ಅನಂತರ ಆಕೆ, ಆತನ ಛಾದರದಲ್ಲಿರುವ ತೂತಿನಲ್ಲಿ ಬೆರಳಿಟ್ಟು ಅದನ್ನಗಲಿಸಿ ನೋಡು ತ್ತಾಳೆ. ಒಳಗಿಂದ ಹೊಳೆಯುತ್ತಿರುವ ಅಪೂನ ಕಣ್ಣುಗಳು ಗೋಚರಿಸುತ್ತವೆ. ಆತ ತಟ್ಟನೆ ಹಾರಿ ಮೇಲಕ್ಕೆದ್ದು ಛಾದರವನ್ನು ಎತ್ತಿ ಎಸೆದು, ಮುಗುಳುನಗುತ್ತಾನೆ.

## ಕ್ಷಯವರ್ಧನ

ಅಪೂ ಬೆರಳುಗಳಿಂದ ಹಲ್ಲುಜ್ಜಿಕೊಳ್ಳುತ್ತಿದ್ದಾನೆ.

ಸರ್ವಜಯಾ ಅಪೂಗೆ ಬಟ್ಟೆ ತೊಡಿಸುತ್ತಿದ್ದಾಳೆ; ಜತೆಗೇ ದುರ್ಗಾ ಆತನ ತಲೆ ಬಾಚುತ್ತಿದ್ದಾಳೆ. ಅದಾದ ಮೇಲೆ ಅಪೂ ಒಂದು ಲೋಟ ಹಾಲು ಕುಡಿಯುತ್ತಾನೆ.

ದುರ್ಗಾ ಆತನ ಬಾಯಿ ಒರೆಸುತ್ತಾಳೆ. ಅನಂತರ, ಇಬ್ಬರೂ ಕೂಡಿ ಶಾಲೆಗೆ ಹೊರಡು ತ್ತಾರೆ.

ಕ್ಷಯವರ್ಧನ

ಶಾಲೆ. ಅದು ಅಂಗಡಿಯೂ ಹೌದು. ಉಪಾಧ್ಯಾಯನೇ ಅಂಗಡಿ ನಡೆಸುವ ಮಾಲಿ ಕನೂ ಆಗಿದ್ದಾನೆ. ಆತ, ಒಂದು ಪೊಟ್ಟಣವನ್ನು ತಕ್ಕಡಿಯ ಮೇಲಿಟ್ಟು, ತೂಗುತ್ತ, ಎದುರು ನೆಲದ ಮೇಲೆ ಕುಳಿತುಕೊಂಡಿರುವ ಕೆಲವು ಮಕ್ಕಳಿಗೆ ಪಾಠವನ್ನು ಹೇಳಿ ಕೊಡುತ್ತಿದ್ದಾನೆ.

ಉಪಾಧ್ಯಾಯ— ಧರಣಿ ಮಂಡಲ ಮಧ್ಯದೊಳಗೇ........ ಹೇ, ಹರಿ, ಮತ್ತ್ಯಾಕೆ ಎದ್ದು ನಿಂತೆ ? ಸ್ಲೇಟು ಅಳಿಸೋದು ಎಷ್ಟು ಸಲ ? (ಬಂದ ಗಿರಾಕಿ ಹೆಣ್ಣಿಗ) ಪುಂಟಿ, ಏನು ಬೇಕು ಅಂದೆ ?

ಪುಂಟಿ— ಒಂದು ಬಿಲ್ಲೇದು ಪುರಿ ಕೊಡಿ.

ಉಪಾಧ್ಯಾಯ— ಒಂದು ಬಿಲ್ಲೆ ಪುರೀನಾ ? ಬಿಲ್ಲೆ ಕೊಡು.

ಆತ ಮಕ್ಕಳಿಗೆ ಉಕ್ತಲೇಖನ ಬರೆಸುತ್ತಲೇ ಪುಂಟಿಗೆ ಅಳೆದುಕೊಡುತ್ತಾನೆ. ಅವಳ ಕೈಗೆ ಪೊಟ್ಟಣ ಕೊಟ್ಟು, ಆಕಳಿಸಿ, ಪುನಃ ಉಕ್ತಲೇಖನಕ್ಕೆ ತೊಡಗುತ್ತಾನೆ. ಹುಡು ಗರಲ್ಲಿ ಇಬ್ಬರು ತಮ್ಮ ಪಾಡಿಗೆ ತಾವು ಸ್ಲೇಟಿನಮೇಲೆ ಗೆರೆ-ಆಟ ಆಡಿಕೊಳ್ಳುತ್ತಿದ್ದಾರೆ. ಅಷ್ಟರಲ್ಲಿ ಆಚೆಯಿಂದ, ಯಾರೋ ನಮಸ್ಕಾರ ಹೇಳುತ್ತ ಬರುತ್ತಾರೆ. ಆತ ವಯ ಸ್ಸಾದವ, ಮಜುಂದಾರ್ ಎಂದು ಹೆಸರು.

ಉಪಾಧ್ಯಾಯ— ಬನ್ನಿ ಬನ್ನಿ ಮಂಡಲ ಮಾಶಯ್,

ಮಜುಂದಾರ್— ಏನಪ್ಪಾ, ಇಲ್ಲಿ ಮನುಷ್ಯನ್ನ ಕೊಲ್ಲೋದಕ್ಕೆ ಒಂದು ಯಂತ್ರ ತಯಾರಿಸಿಟ್ಟಿದೀಯೆ !

ಮಜುಂದಾರ್, ಅಲ್ಲೇ ರಸ್ತೆಯ ಮೇಲೆ ಆಗೆದಿಟ್ಟಿರುವ ಒಂದು ಗುಂಡಿಯ ಕಡೆ ತೋರಿ ಸುತ್ತಾನೆ. ಅನಂತರ, ಅಂಗಡಿಯ ಚಪ್ಪರದೊಳಕ್ಕೆ ಪ್ರವೇಶಿಸಿ, ಅಲ್ಲೇ ಕೂತಿರುವ ಒಬ್ಬ ಹಿರಿಯನಿಗೆ ನಮಸ್ಕಾರ ಹೇಳುತ್ತಾನೆ. ಆಮೇಲೆ, ಮಕ್ಕಳ ಕಡೆ ದಿಟ್ಟಿಸುತ್ತ ಅಲ್ಲಿರುವ ಸ್ಟೂಲಿನ ಮೇಲೆ ಕುಳಿತುಕೊಳ್ಳುತ್ತಾನೆ.

ಮಜುಂದಾರ್—ಒಳ್ಳೇ ಬಲೆ ಹಾಕಿದಿಯೇ ! ಎಷ್ಟು ಇದಾವೆ ಮೀನು?

ಉಪಾಧ್ಯಾಯ— ಎಂಟು ಇದ್ದವು. ಈಗ ಇವನೊಬ್ಬ (ಅಪೂನನ್ನು ತೋರಿಸಿ) ಹೊಸದಾಗಿ ಬಂದಿದಾನೆ.

ಮಜುಂದಾರ್— ನವಮಣಿಗಳು, ಅನ್ನು. ಇದು ಹೊಸಾ ಮಣಿ !

ಇದನ್ನು ಕೇಳಿ ಅಪೂ ನಗುತ್ತಾನೆ. ಉಪಾಧ್ಯಾಯ ನೋಡುತ್ತಾನೆ.

ಉಪಾಧ್ಯಾಯ— ಇದೇನು ನಾಟಕ ಅಂತ ತಿಳ್ಕೊಂಡ್ಯಾ ?

ಮಜುಂದಾರ್— ಮಡೆಯುಗಳು, ಕಡೆಗೂ ನೇಗಿಲು ಹಿಡಿಯೋದೇ ಹಣೆಬರಹ !

ಉಪಾಧ್ಯಾಯ ತಿರುಗಿ ನೋಡುವಾಗ ಮಜುಂದಾರ್ ಏನನ್ನೋ ಹುಡುಕುತ್ತಿದ್ದಾನೆ.

ಉಪಾಧ್ಯಾಯ— ಏನೋ ಹೇಳೋದಕ್ಕೆ ಹೊರಟಿದ್ರಿ........

ಮಜುಂದಾರ್— ಹೌದಪ್ಪಾ, ಒಳ್ಳೇ ಜಾತ್ರಾ ನೋಡಿದೀಯೇನು ?

ಉಪಾಧ್ಯಾಯ— ಜಾತ್ರಾನಾ ? ಎಲ್ಲೋ ಒಂದು ಸಲ........ —ಹೇ ಗೋಪಿ, ಏನು ಮಾಡ್ತಿದೀಯಾ ?

ಮಜುಂದಾರ್— ಅವಾಬ್‌ಗಂಜ್ ಬಾಬುಗಳು ಒಳ್ಳೇ ಜಾತ್ರಾ ಕರೆಸ್ತಿದಾರೆ, ಗೊತ್ತಾ ?

ಉಪಾಧ್ಯಾಯ— ಹೌದಾ ?........ —ಇಲ್ನೋಡು, ಬಡಿದ್ಬಿಡ್ತೀನೆ ನಿನ್ನ !

ಮಜುಂದಾರ್— ನಿಶ್ಚಿಂದಿಪುರ ಮೀರಿಸಿ ಬಿಡಬೇಕು ಅಂತ ಅವರಿಗೆ ! ಆದರೆ, ಅವರಿಗೆ ಗೊತ್ತಿಲ್ಲ, ಈ ವೈದ್ಯ ಮಜುಂದಾರ್, ಇವರು ಯಾರೂ ಕಂಡು ಕೇಳದಂಥಾ ಭಾರೀ ಮೇಳ ಕರೆಸ್ತಿದಾನೆ ಅನ್ನೋದು.... ಎಲ್ಲಿ ನಿನ್ನ ಎಣ್ಣೆ ಬಾಟ್ಲಿ ಕೊಡ್ತೀಯಾ ? ಸ್ನಾನಕ್ಕೆ ಹೋಗ್ತಾ ಇದೇನೆ.... ಅಲ್ಲ, ನೀನೇನೂ ಜಾತ್ರಾಕ್ಕೆ ವಂತಿಗೆ ಕೊಡೋದು ಬೇಡ.

ಉಪಾಧ್ಯಾಯ— ಹಾ.... ಹಾ....

ಮಜುಂದಾರ್— ನೋಡು, ಮತ್ತೆ ಈ ವೈದ್ಯ ಮಜುಂದಾರ್‌ನನ್ನು ಮರೆತುಬಿಡಬೇಡ.

ಉಪಾಧ್ಯಾಯ— ಇಲ್ಲ ಇಲ್ಲ....

ಮಜುಂದಾರ್ ಎಣ್ಣೆಯನ್ನು ತೆಗೆದುಕೊಂಡು ತಲೆಗೆ ತಿಕ್ಕಿಕೊಳ್ಳುತ್ತ, ಸೀಸೆಯನ್ನು ಹಿಂದಕ್ಕೆ ಕೊಡುತ್ತಾನೆ. ಮೀನುಗಾರ ಚಕ್ರವರ್ತಿ, ಈತ ಅಂಗಡಿಯಲ್ಲಿರುವುದನ್ನು ಕಂಡು ಮೆಲ್ಲಗೆ ಕಾಣದ ಹಾಗೆ ಜಾರಿಕೊಳ್ಳಲು ಯತ್ನಿಸುತ್ತಿದ್ದಾನೆ.

ಮಜುಂದಾರ್-- ಏ ಚಕ್ರವರ್ತಿ, ನಿಲ್ಲು ನಿಲ್ಲು. ........ಪ್ರಸನ್ನ ಈ ಮೇಳದಲ್ಲಿ ಎಂಥಾ ಮದ್ದಲೆಗಾರ ಇದಾನೆ ಗೊತ್ತಾ ? ನೋಡಬಹುದಂತೆ, ಹೇಗೆ ಬಾರಿಸ್ತಾನೆ ಅನ್ನೋದನ್ನ. ಮದ್ದಲೆ ಅಂದ್ರೆ ಗುಡುಗು ಕೇಳಿದ ಹಾಗೆ ಇರತ್ತೆ.

ಉಪಾಧ್ಯಾಯ— ಹೌದಾ ?

ಮಜುಂದಾರ್—ಚಕ್ರವರ್ತಿ, ನಿನ್ನ ಪೂಜೆ ಬಾಬ್ತು ದಕ್ಷಿಣೆ.... ಅರೆ ಎಲ್ಲಿ ಕೀಸಿಬಿಟ್ಟ ಇವನು ?....

ಹಾಗನ್ನುತ್ತ ಮಜುಂದಾರ್ ನಿಷ್ಕ್ರಮಿಸುತ್ತಾನೆ. ಈಗ ಉಪಾಧ್ಯಾಯ ತಿರುಗಿದಾಗ ಮಕ್ಕಳು ಆಡಿಕೊಳ್ಳುತ್ತಿರುವುದು ಕಣ್ಣಿಗೆ ಬೀಳುತ್ತದೆ.

ಉಪಾಧ್ಯಾಯ— ಹೇ ಸುಧೆ, ಇಲ್ಲಿ ಬಾ....ನಿನ್ನ ಸ್ಲೇಟು ತಗೊಂಡು ಬಾ.... ಪಾಠಕ್, ಎಲ್ಲಿ, ಅವನ ಸ್ಲೇಟು ಕಿತ್ಕೊಂಡು ಬಾ....

ಅವನ ಸ್ಲೇಟನ್ನು ಕಿತ್ತುಕೊಂಡು ಮಕ್ಕಳು ಕೈಯಿಂದ ಕೈಗೆ ದಾಟಿಸಿ ಉಪಾಧ್ಯಾಯನಿಗೆ ತಲುಪಿಸುತ್ತಾರೆ.

ಉಪಾಧ್ಯಾಯ— ಏನು ಬರೆದಿದೀಯಾ ಹೇಳು.... ಇಲ್ಲಿ ಬಾ, ಬಾ ಇಲ್ಲಿ.

ಒಬ್ಬ ಹುಡುಗ ಸುಧೆ ಎಂಬ ಹುಡುಗನನ್ನು ಕಿವಿ ಹಿಡಿದು ಉಪಾಧ್ಯಾಯನ ಹತ್ತಿರ ಕರೆದೊಯ್ಯುತ್ತಾನೆ. ಅಪೂ ಮತ್ತು ಪುಂಟಿ ಹೆದರಿ ನೋಡುತ್ತಿದ್ದಾರೆ. ಉಪಾಧ್ಯಾಯ ಹಿಟ್ಟಿನ ಚೀಲದಲ್ಲಿ ಹುಗಿದಿಟ್ಟ ಕೋಲನ್ನು ಎತ್ತಿಕೊಳ್ಳುತ್ತಾನೆ.

ಉಪಾಧ್ಯಾಯ— ಎಲ್ಲಿ ಕೈಹಿಡಿ, ಹಿಡಿ.

ಆತ ಹುಡುಗನಿಗೆ ಬಾರಿಸತೊಡಗಿದಾಗ ಪುಂಟಿ ತಿರುಗಿ ಓಡುತ್ತಾಳೆ. ಅಪೂ ಹೆದರಿ ನೋಡುತ್ತಿದ್ದಾನೆ.

ಅಡುಗೆಮನೆಯ ಹೊರಗೆ ಸರ್ವಜಯಾ ತರ್ಕಾರಿ ಹೆಚ್ಚುತ್ತ ಕೂತಿದ್ದಾಳೆ. ಮುದುಕಿ ಅಡುಗೆಮನೆಯೊಳಕ್ಕೆ ಕದ್ದು ಹೋಗುತ್ತಿದ್ದಾಳೆ. ಸರ್ವಜಯಾ ಕಿಟಕಿಯಲ್ಲಿ ಅದನ್ನು ನೋಡುತ್ತಾಳೆ.

ಸರ್ವಜಯಾ— ಏನು ಮಾಡ್ತಿದೀರಿ? ಅಡುಗೆಮನೆಯಿಂದ ಏನು ತಗೊಂಡ್ರಿ?

ಮುದುಕಿ— ಓ, ಏನಿಲ್ಲ.

ಸರ್ವಜಯಾ— ಏನಿಲ್ಲ ಅಂತೀರಲ್ಲ, ಕಪಾಟಿನಿಂದ ಏನೋ ತಗೊಂಡಿದ್ದನ್ನ ನಾನೇ ನೋಡಿದೇನೆ.

ಮುದುಕಿ— ಏನೋ ಮೆಣಸಿನಕಾಯಿ ಇರಲಿಲ್ಲ. ಎರಡು ತಗೊಂಡೆ ಅಷ್ಟೆ.

ಸರ್ವಜಯಾ— ಎಲ್ಲಿ ತೋರಿಸಿ. ನಂಗೆ ಹೇಳಬಹುದಿತ್ತಲ್ಲ. ಅಡುಗೆ ಮನೇಲಿ ಹೀಗೆಲ್ಲಾ ಮಾಡಿದ್ರೆ ನಂಗೆ ಸರಿಬರೋಲ್ಲ ಅಂತ ನಿಮಗೆ ಗೊತ್ತಿಲ್ವಾ?

ಗಿಡಮರಗಳ ಕಾಲುದಾರಿಯಲ್ಲಿ ದುರ್ಗಾ ಮನೆ ಕಡೆ ಬರುತ್ತಿದ್ದಾಳೆ. ಮನೆಗೆ ಬರುತ್ತಾಳೆ. ಕಟ್ಟೆಯಮೇಲೆ ಕೂತಿರುವ ಮುದುಕಿಯ ಹಿಂಭಾಗದಲ್ಲಿ ಬಂದು ನಿಂತು, ತಾನು ತಂದ ಪೇರಲಹಣ್ಣನ್ನು ಆಕೆಗೆ ತೋರಿಸಿ ಆಕೆಯನ್ನು ಬೆರಗುಗೊಳಿಸುತ್ತಾಳೆ. ಮುದುಕಿ ಹಣ್ಣನ್ನು ಕೊಂಡು ಪರೀಕ್ಷಿಸುತ್ತಿರುವಂತೆ ಸರ್ವಜಯಾ ಕೂಗುತ್ತಾಳೆ.

ಸರ್ವಜಯಾ— ಸುಮ್ನೆ ಇರೋವಾಗ ಇಲ್ಲಿ ಬಂದು ಕೂತು ತರಕಾರಿ ನಾದ್ರೂ ಹೆಚ್ಚು.

ದುರ್ಗಾ ಮುದುಕಿಗೆ ಇನ್ನೊಂದು ಪೇರಲಹಣ್ಣು ಕೊಟ್ಟು ಅಲ್ಲಿಂದ ತಾಯಿಯ ಹತ್ತಿರ ಬಂದು ಅವಳ ಪಕ್ಕದಲ್ಲಿ ಕೂರುತ್ತಾಳೆ. ತಾಯಿಗೆ ತರಕಾರಿ ಹೆಚ್ಚುವುದರಲ್ಲಿ ನೆರವಾಗುತ್ತಾಳೆ.

ಸರ್ವಜಯಾ—ನಿನ್ನ ವಯಸ್ಸಿನ ಹುಡುಗರು ಎಷ್ಟು ಮನೆ ಕೆಲಸ ಮಾಡ್ತಾರೆ. ಅಡುಗೆ ಮಾಡೋದು ತರಕಾರಿ ಹೆಚ್ಚೋದು, ಪಾತ್ರೆ ತೊಳೆಯೋದು—ಅಂತ ಮಾಡ್ತಾನೇ ಇರ್ತಾರೆ. ಪೂಜೆ, ವ್ರತ—ಎಲ್ಲಾ

ಮಾಡ್ತಿರ್ತಾರೆ. ನಿನ್ನ ಹಾಗೆ ಸುಮ್ಮನೆ ತಿರುಗ್ತಾ ಇದ್ರೆ ಕೆಲಸ ಆಗತ್ತಾ ? ಕೆಲಸ ಕಲಿತುಕೊಳ್ಳೋದು ಬೇಡವಾ ?........ಇವತ್ತೇನಾದ್ರೂ ಜ್ವರ ಬಂದಿತ್ತಾ ? ಎಲ್ಲಿ ನೋಡೋಣ........ನೆನಪು ಮಾಡ್ಕೊಂಡು ಇವತ್ತು ಸಾಯಂಕಾಲವಾದ್ರೂ ತುಳಸಿರಸ ತಗೋ.

**ಕ್ಷಯವರ್ಧನ**

(೫)

ಹರಿಹರ ಮತ್ತು ಅಪೂ ಮನೆಯೊಳಕ್ಕೆ ಪ್ರವೇಶಿಸುತ್ತಾರೆ.

ಹರಿಹರ—ಹೋಗು, ಪುಂಟಿಯ ತಾಯೀನ ನೋಡ್ದೆ ಅಂತ ಅಮ್ಮನಿಗೆ ಹೇಳು ಹೋಗು.

ಅಪೂ ಮಲಗುವ ಕೋಣೆಗೆ ಓಡುತ್ತಾನೆ. ಅಲ್ಲಿಂದ ಹಾಗೇ ಓಡುತ್ತ ಹೊರಗೆ ಬಂದು ಅಂಗಳ ದಾಟಿ ಅಡುಗೆ ಮನೆಗೆ ಬರುತ್ತಾನೆ. ಅಲ್ಲಿ ಕೂತು ಅಡುಗೆ ಮಾಡುತ್ತಿರುವ ತಾಯಿಯ ಹತ್ತಿರ ಧಾವಿಸುತ್ತಾನೆ.

ಸರ್ವಜಯಾ—ಏ, ಮುಟ್ಟಬೇಡ........ಆಯ್ತು, ಮುಟ್ಟೇಬಿಟ್ಟೆ !

ಅಪೂ—ನಂಗೆ ಹಸಿವಾಗ್ತಿದೆ.

ಸರ್ವಜಯಾ—ಇಷ್ಟು ಬೇಗ !....ಮುಂಡಕ್ಕಿ ತಿನ್ನಲಿಲ್ವಾ ?

ಅಪೂ—ತಿಂದೆ.

ಸರ್ವಜಯಾ—ಮತ್ತೆ ?

ದುರ್ಗಾ—ಹೇ ಅಪೂ, ಇಲ್ಲಿ ಬಾ.

ಅಪೂ ತಾಯಿಯನ್ನು ಬಿಟ್ಟು ದುರ್ಗಾಳ ಬಳಿಗೆ ಓಡುತ್ತಾನೆ. ಸರ್ವಜಯಾ ಆತನನ್ನು ಕೂಗುತ್ತಾಳೆ.

ಸರ್ವಜಯಾ—ಅಲ್ಲಿ ಬಟ್ಟಲಲ್ಲಿ ಅನ್ನ ಇದೆ. ದುರ್ಗಾಗೆ ಹೇಳು, ಕೊಡ್ತಾಳೆ.

ಹರಿಹರ ಮೆಟ್ಟಲಿಳಿದು ಅಂಗಳಕ್ಕೆ ಬರುತ್ತಾನೆ. ಮೇಲಕ್ಕೇಳಲು ಹೆಣಗುತ್ತಿರುವ ಮುದುಕಿಯನ್ನು ನೋಡುತ್ತಾನೆ.

ಮುದುಕಿ—ಸ್ವಲ್ಪ ಮೇಲಕ್ಕೆ ಎತ್ತತೀಯಾ ?

ಹರಹರ—ಏನಾಯ್ತು ?

ಮುದುಕಿ—ಯಾಕೋ ಪಕ್ಕೆ ಹಿಡಿದುಕೊಂಡುಬಿಟ್ಟಿದೆ. ತುಂಬಾ ನೋವು.

ಹರಿಹರ ಆಕೆಯನ್ನೆತ್ತಿ ಕಟ್ಟೆಯಮೇಲೆ ಕೂರಿಸಲು ನೆವಾಗುತ್ತಾನೆ.

ಹರಿಹರ—ಈಗ ಹೇಗಿದಿಯು ನೀನು ?

ಮುದುಕಿ—ಮುದುಕರನ್ನ ಯಾರು ಕೇಳ್ತಾರೆ ಹೇಳು.

ಹರಿಹರ—ಯಾಕೆ, ಏನಾಯ್ತು ?

ಮುದುಕಿ—ನೋಡಿಲ್ಲಿ........

ಮುದುಕಿ, ಛಾದರದಲ್ಲಿ ತನ್ನ ಮುಖದಷ್ಟು ಅಗಲದ ತೂತು ಬಿದ್ದಿರುವುದನ್ನು ತೋರಿಸುತ್ತಾಳೆ.

ಹರಿಹರ—ಏನು, ಹೇಳು.

ಮುದುಕಿ—ನೋಡು ಛಾದರ. ಸಂಜೆ ನಾನು ಇದನ್ನೇ ಹೊದ್ಕೋಬೇಕು.

ಹರಿಹರ—ಇರ್ಲಿ. ಪೂಜಾ ಬರತ್ತಲ್ಲ, ಆಗ ಒಂದು ಹೊಸತು ಕೊಂಡು ಕೊಡ್ತೀನೆ.

ಮುದುಕಿ—ಹೌದಾ ? ಕೊಂಡುಕೊಡ್ತೀಯಾ ? ಹರೀ ನಿಜವಾಗಿ ಕೊಂಡುಕೊಡ್ತೀಯಾ ?

ಹರಿಹರ—ಹೋ ಹೋ. ನಿಜವಾಗಿ

ಹರಿಹರ ಮುಂದೆ ನಡೆದು ಸರ್ವಜಯಾ ಕೂತಿರುವಲ್ಲಿಗೆ ಬರುತ್ತಾನೆ. ಆಕೆ, ಹರಿಹರ ಮುದುಕಿಗೆ ಹೇಳಿದ್ದನ್ನು ಕೇಳಿ ಕಿರಿಕಿರಿಗೊಂಡಿದ್ದಾಳೆ. ಹರಿಹರ ಆಕೆಗೆ ತನ್ನ ಹುಕ್ಕಾವನ್ನು ನೀಡುತ್ತಾನೆ.

ಹರಿಹರ—ಕೆಂಡ ಹಾಕಿ ಕೊಡ್ತೀಯಾ ?

ಸರ್ವಜಯಾ—ನಿಮಗೆ ಹೊಗೆಸೊಪ್ಪಿಗೆ ಕೆಂಡ ಕೊಡೋದಕ್ಕೆ ಯಾವಾಗಲೂ ಬೆಂಕಿ ಉರಿಸಿಕೋತಾನೇ ಇದ್ರೆ ಆದೀತು. ಹೇಗೂ ಮನೇಲಿ

ಕಟ್ಟೆಗೆ ತಂದು ರಾಶಿ ಹಾಕಿದೀರಲ್ಲ !

ಆಕೆ ಹುಕ್ಕಾವನ್ನು ಒಯ್ದು ಅಡುಗೆ ಮನೆಯಲ್ಲಿ ಕೆಂಡ ತುಂಬಿಸಿಕೊಂಡು ತರುತ್ತಾಳೆ; ಆತನಿಗೆ ಕೊಟ್ಟು ಪುನಃ ತನ್ನ ಕೆಲಸದಲ್ಲಿ ತೊಡಗುತ್ತಾಳೆ. ಹರಿಹರ ಆಕೆಯ ಹಿಂದೆಯೇ ಚಾವಡಿಯ ಮೇಲೆ ಕೂರುತ್ತಾನೆ.

ಸರ್ವಜಯಾ—ಸಂಬಳದ ಬಗ್ಗೆ ಸರಾಫ್‌ಗೆ ಏನಾದ್ರೂ ಹೇಳಿದ್ರಾ? ಎಷ್ಟು ದಿನ ಅಂತ ಹೀಗೆ ಬಾಯಿ ಮುಚ್ಕೊಂಡು ಕೂತ್ಕೋತೀರಿ ?

ಹರಿಹರ—ರಾಯ್ ದೊಡ್ಡಪ್ಪನ ಜಮೀನಿನ ಬಗ್ಗೆ ಏನೋ ರಗಳೆ ಶುರುವಾಗಿದೆಯಂತೆ........

ಸರ್ವಜಯಾ—ಅದಕ್ಕೆ ?

ಹರಿಹರ—ಸದ್ಯ ಸಂಬಳ ಕೇಳೋಕಾಗೋಲ್ಲ. ಆಮೇಲೆ ಕೆಲಸಾನೇ ಹೋಗಿಬಿಡಬಹುದು.

ಸರ್ವಜಯಾ—ಹೋದ್ರೆ ಹೋಗ್ಲಿ. ಬೇರೆ ಎಲ್ಲಾದ್ರೂ ಕೆಲಸ ಸಿಗೋದಿಲ್ವಾ? ತಿಂಗಳಿಗೆ ಬರೀ ಎಂಟು ರೂಪಾಯಿ. ಅದೂ ಮೂರು ತಿಂಗಳಿಂದ ಬಾಕಿ. ಇದೆಂಥಾ ಕೆಲಸ ?

ಹರಿಹರ—ಮೊದಲು ಹೀಗೆ ಆಗ್ತಿರಲಿಲ್ಲ.

ಸರ್ವಜಯಾ—ಹಾಗಂದ್ರೆ ನೀವು ಬರೀಕೈಯಲ್ಲಿ ಕೂತಿರಬೇಕಾ ? ಮನೆ ಸ್ಥಿತಿ ನಿಮಗೆ ತಿಳಿಯೋದಿಲ್ವಾ ? ಮಕ್ಕಳು ತಿನ್ನೋದಕ್ಕಿಲ್ಲ, ತೊಡೋದಕ್ಕಿಲ್ಲ. ಮಗು ದುರ್ಗಾಗೆ ಸಣ್ಣದಾಗಿ ಜ್ವರ ಬರ್ತಿದೆ. ಔಷಧ ಪಥ್ಯ ಕೂಡಾ ಇಲ್ಲ. ಅಪೂ ಶಾಲೆಗೆ ಹರಕು ಬಟ್ಟೆ ಹಾಕ್ಕೊಂಡೇ ಹೋಗ್ತಿದಾನೆ. ಮನೆ ರಿಪೇರಿ ಮಾಡೋದಂತೂ ಆಗೋದೇ ಇಲ್ಲ. ಸಾಲ ತೀರ್ಸೋದಾದ್ರೂ ಹೇಗೆ ? ಶೇಜೋ ದೊಡ್ಡಮ್ಮ ಕೊಟ್ಟ ಆ ಐದು ರೂಪಾಯಿ ಈಗಾಗಲೇ ಆರು ತಿಂಗಳಾಯ್ತು. ಅವಳು ಯಾವತ್ತು ಕೇಳತಾಳೆ, ಏನು ಹೇಳ್ತಾಳೆ ಅಂತ ಹೇಳೋಕಾಗೋಲ್ಲ. ಏನಾದ್ರೂ ಮಾಡಿ. ದಾರಿ ಹುಡುಕಿ.

ಮನೆಯ ಇನ್ನೊಂದು ಭಾಗದಲ್ಲಿ, ದುರ್ಗಾ ಹುಣಿಸೆಕಾಯಿ-ಉಪ್ಪು-ಖಾರ ಹದ ಮಾಡುತ್ತಿದ್ದಾಳೆ. ಅಪೂ ಆಕೆಗೆ ನೆರವಾಗುತ್ತಿದ್ದಾನೆ. ಆತ ಮಲಗುವ ಕೋಣೆಗೆ ಹೋಗಿ ಕಪಾಟಿನಲ್ಲಿ ಇಟ್ಟಿರುವ ಎಣ್ಣೆ ತುಂಬಿದ ಕರಟವನ್ನು ತರುತ್ತಾನೆ. ದುರ್ಗಾ ಅದನ್ನು ತೆಗೆದುಕೊಂಡು, ತಾನು ಇನ್ನೊಂದು ಕರಟದಲ್ಲಿ ಹದಮಾಡಿದ ಹುಣಿಸೆ

ಕಾಯಿಗೆ ಅದನ್ನು ಸುರಿಯುತ್ತಾಳೆ. ಆಮೇಲೆ ಅದನ್ನು ನೆಕ್ಕಿನೋಡಿ ತೃಪ್ತಿಗೊಳ್ಳು ತ್ತಾಳೆ.

ದುರ್ಗಾ—ಕೂತ್ಕೋ. ಅಮ್ಮನಿಗೆ ಹೇಳ್ತೀಯಾ ?

ಅಪೂ ತಲೆ ಆಡಿಸುತ್ತಾನೆ. ಆಕೆ, ಅವನಿಗೂ ಅದನ್ನು ಕೊಡುತ್ತಾಳೆ. ಆತ ಅದನ್ನು ಆಕೆಯ ಬೆರಳುಗಳಿಂದ ನೆಕ್ಕಿಕೊಳ್ಳುತ್ತ ರುಚಿಯೆನಿಸಿ ಚಪ್ಪರಿಸತೊಡಗುತ್ತಾನೆ. ಸದ್ದು ಮಾಡಿದ್ದಕ್ಕೆ ಆಕೆ ತಟ್ಟನೆ ಅವನ ಮುಖದಮೇಲೆ ಬಾರಿಸುತ್ತಾಳೆ.

ದುರ್ಗಾ—ಥೂ ಕತ್ತೆ ! ಅಮ್ಮನಿಗೆ ಕೇಳಿದ್ರೆ ?

ಇಬ್ಬರೂ ಕೂಡಿ ತಿನ್ನತೊಡಗುವಾಗ, ದುರ್ಗಾ ಮೇಲಕ್ಕೆ ನೋಡಿ, ಎದ್ದು, ಅಲ್ಲೇ ಗೋಡೆಯ ಕಿಂಡಿಯ ಮೂಲಕ ಹೊರಕ್ಕೆ ಕಣ್ಣು ಹಾಯಿಸುತ್ತಾಳೆ. ಗಣಗುಡುವ ಗಂಟೆಯ ಸದ್ದು ಕೇಳಿಸುತ್ತದೆ. ಮಿಠಾಯಿ ಮಾರುವವ, ಗಡಿಗೆಗಳಲ್ಲಿ ಅದನ್ನು ಹೊತ್ತು ಬರುತ್ತಿದ್ದಾನೆ.

ದುರ್ಗಾ—ಮಿಠಾಯಿಕಾಕಾ !

ಅಪೂ ಗೋಡೆಯ ಕಿಂಡಿಯಲ್ಲಿ ಇಣುಕಿ ನೋಡುತ್ತಾನೆ. ಆಮೇಲೆ ಇಬ್ಬರೂ ಓಡಿ ಹೋಗಿ ಮನೆಯ ಹೊರಗೆ ನಿಂತು ನೋಡುತ್ತಾರೆ. ಮಿಠಾಯಿಯುವ ಕೆರೆಯ ದಂಡೆ ಯನ್ನು ದಾಟಿ ಈ ಕಡೆಗೇ ಬರುತ್ತಿದ್ದಾನೆ.

ಮಿಠಾಯಿಯುವ—ಕೊಂಡುಕೋತೀರಾ ಮಕ್ಕಳೇ ?

ದುರ್ಗಾ—ಅಪೂ, ಅಪ್ಪನ ಹತ್ತಿರಹೋಗಿ ಒಂದು ಬಿಲ್ಲೆ ತಗೊಂಡು ಬಾ.

ಅಪೂ—ಊಹುಂ. ನೀನೇ ಹೋಗು.

ದುರ್ಗಾ—ನೀ ಹೋಗು.

ಅಪೂ ನಿಧಾನವಾಗಿ ಚಾವಡಿಯಲ್ಲಿರುವ ತಂದೆಯ ಹತ್ತಿರ ಹೋಗಿ ಅವನ ಕಿವಿಯಲ್ಲಿ ಉಸುರತೊಡಗುತ್ತಾನೆ. ತಾಯಿ ನೋಡುತ್ತಾಳೆ.

ಸರ್ವಜಯಾ—ಕೊಡಬೇಡಿ. ಕೊಟ್ಟು ಮಗೂನ್ನ ಹಾಳುಮಾಡಬೇಡಿ. ಹೀಗೇ ದುರಭ್ಯಾಸ ಕಲಿಸೋದು.

ಅಪೂ ಬೇಸರದಿಂದ ಹಿಂದಿರುಗುತ್ತಾನೆ.

ಮಿಠಾಯಿಯವ—ಕೊಳ್ಳೋದಿಲ್ವಾ ?

ದುರ್ಗಾ ತಲೆಯಾಡಿಸುತ್ತಾಳೆ. ಆತ ಹೊರಟುಹೋಗುತ್ತಾನೆ.

ಮಿಠಾಯಿ ಮಾರುವವ, ಗಿಡಮರಗಳು ಕೊಳ ಇರುವ ಕಾಲುದಾರಿಯಲ್ಲಿ ಮುಖರ್ಜಿಯವರ ಮನೆಯ ಕಡೆಗೆ ನಡೆಯುತ್ತಿದ್ದಾನೆ. ದುರ್ಗಾ, ಅಪೂ ಮತ್ತು ಇವರ ನಾಯಿ ಆತನನ್ನು ಹಿಂಬಾಲಿಸಿ ಮುಖರ್ಜಿಯವರ ಮನೆಯ ತನಕವೂ ನಡೆಯುತ್ತಾರೆ. ಮುಖರ್ಜಿಯವರ ಮನೆಯ ಪ್ರಾಗಾರದೊಳಗೆ ಆಡುತ್ತಿರುವ ಮಕ್ಕಳು ಮಿಠಾಯಿಯವ ಬಂದುದನ್ನು ಕಂಡು ಕೂಗತೊಡಗುತ್ತಾರೆ.

ಮಕ್ಕಳು—ಮಿಠಾಯಿಕಾಕಾ ಬಂದ!

ಮಕ್ಕಳೆಲ್ಲರೂ ಮಿಠಾಯಿಯವನನ್ನು ಸುತ್ತುಗಟ್ಟುತ್ತಾರೆ. ದುರ್ಗಾ ಮತ್ತು ಅಪೂ ಹೊರಬಾಗಿಲಲ್ಲಿ ನಿಂತು ನೋಡುತ್ತಿದ್ದಾರೆ. ಈಗ ಶೇಜ್‌ಬೌ ಹೊರಕ್ಕೆ ಬರುತ್ತಾಳೆ. ಆಕೆಯನ್ನು ಹಿಂಬಾಲಿಸಿ ರಾಣು ಬರುತ್ತಿದ್ದಾಳೆ. ಶೇಜ್‌ಬೌ ಸುತ್ತುಗಟ್ಟಿದ ಮಕ್ಕಳನ್ನ ಸರಿಸುತ್ತ ಮಿಠಾಯಿಯವನ ಹತ್ತಿರ ಬರುತ್ತಾಳೆ.

ಶೇಜ್‌ಬೌ— ಏನು ತಂದಿದೀಯ ನೋಡೋಣ.

ಮಿಠಾಯಿಯವ ತಾನು ತಂದಿರುವ ತಿನಿಸುಗಳ ವರ್ಣನೆ ತೊಡಗುತ್ತಾನೆ. ಅಷ್ಟರಲ್ಲಾಗಲೇ ದುರ್ಗಾ ಮತ್ತು ಅಪೂ ಅಲ್ಲಿ ಬಂದಿರುವುದನ್ನು ಕಂಡು ಮಕ್ಕಳು ಅವರನ್ನು ಆಟಕ್ಕೆ ಕರೆಯುತ್ತಾರೆ.

ತೇಪ— ದುರ್ಗಾ ನಮ್ಮ ಜತೆ ಇರ್ಲಿ. ಅಪೂ ನಮಗೆ ಬೇಡ. ಅವನು ಯಾತಕ್ಕೂ ಬರೋದಿಲ್ಲ.

ದುರ್ಗಾ— ಅಪೂ, ಆಡೋಣ ಬಾ.

ಅಪೂ ನಿರಾಕರಿಸುತ್ತಾನೆ.

ದುರ್ಗಾ— ಹಾಗಾದ್ರೆ ನೀನು ಹಿಂದಕ್ಕೆ ಹೋಗು. ನಾನು ಸ್ವಲ್ಪ ಹೊತ್ನಲ್ಲೇ ಬರ್ತೀನೆ........ ಬಾ ಕೋಟಿ.

ತೇಪ— ಅಪೂ ಯಾತಕ್ಕೂ ಬರೋದಿಲ್ಲ. ಅಪೂ ದಂಡ! ಅಪೂ ದಂಡ!

ರಾಣು ದುರ್ಗಾಳನ್ನು ಕಂಡು ಆಕೆಯನ್ನು ಕರೆಯುತ್ತಾಳೆ.

ರಾಣು— ದುರ್ಗಾ, ಮಿಠಾಯಿ ಬೇಕಾ ?

ಶೇಜ್‌ಬೌ— ಹಾಗೆ ಪ್ರತೀ ದಿನ ಅವಳಿಗೆ ಮಿಠಾಯಿ ಕೊಡೋಕೆ ಹೋಗ್ಬೇಡ ಅಂತ ಹೇಳಿರಲಿಲ್ವಾ ? ಕೈಯಲ್ಲಿ ದುಡ್ಡು ಇದ್ರೆ ಅವರೇ ಕೊಂಡುಕೊಳ್ಳಲಿ. ನಂಗಂತೂ ಈ ಥರಾ ಹೊಟ್ಟೆಬಾಕತನ ನೋಡೋಕ್ಕೆ ಆಗೋಲ್ಲ....... ಎಲ್ಲಿ ನೋಡೋಣ, ಏನು ತಂದಿದೀಯೆ ಅಂತ....

ಈಗ ಮಕ್ಕಳೆಲ್ಲ ತಾರಸಿ ಹತ್ತಿ ಹೋಗುತ್ತಿದ್ದಾರೆ. ದುರ್ಗಾ ಈ ಗುಂಪನ್ನು ಬಿಟ್ಟು, ಚಿಕ್ಕ ಹುಡುಗಿ ತುನೂಳ ಹತ್ತಿರ ಹೋಗುತ್ತಾಳೆ. ತುನೂ ಮೂಲೆಯಲ್ಲಿ ಕೂತು ಮಣಿಯನ್ನು ಪೋಣಿಸುತ್ತಿದ್ದಾಳೆ. ದುರ್ಗಾ ಅವಳ ಪಕ್ಕದಲ್ಲಿ ಕೂರುತ್ತಾಳೆ.

ದುರ್ಗಾ— ತುನೂ, ನೀ ಆಡೋಕೆ ಹೋಗೋಲ್ವಾ ?.... ಹೇ, ಏನು ಮಾಡ್ತಿದೀಯೆ ? ಎಷ್ಟು ಚನ್ನಾಗಿದೆ! ಯಾರು ಕೊಟ್ಟರು ಇವನ್ನ ?

ತುನೂ— ಅಪ್ಪ.

ದುರ್ಗಾ— ನಂಗೆ ಕೊಡ್ತೀಯಾ ?

ತುನೂ— ಇಲ್ಲ.

ದುರ್ಗಾ— ಕೊಡು.

ತುನೂ— ಇಲ್ಲ.

ರಾಣು ದುರ್ಗಾಳ ಬಳಿಗೆ ಬಂದು, ಆಕೆಯ ಬಾಯಿ ತೆರೆಸಿ ಮಿಠಾಯಿ ತಿನಿಸುತ್ತಾಳೆ. ಅಪೂ ಇನ್ನೂ ಬಾಗಿಲ ಬುಡದಲ್ಲೇ ಬೇಸರದಿಂದ ನಿಂತಿದ್ದಾನೆ ಮಿಠಾಯಿಯುವ ಹೋಟು ಹೋಗುತ್ತಿದ್ದಾನೆ. ಶೇಜ್‌ಬೌ ಕೂಗುತ್ತಿದ್ದಾಳೆ.

ಶೇಜ್‌ಬೌ— ಎಲ್ಲಾ ಬನ್ನಿ. ನಿಮ್ಮ ಪಾಲು ತಗೊಂಡು ಹೋಗಿ.

ಮಕ್ಕಳು— ಬಂದೆವು, ಬಂದೆವು.

ಶೇಜ್‌ಬೌ— ತುನೂ, ಬಾ.

## ಕ್ಷಯವರ್ಧನ

ಸಂಜೆಯಾಗಿದೆ. ದುರ್ಗಾ ಮತ್ತು ಅಪೂ ಹಸುವನ್ನು ಹೊಡೆದುಕೊಂಡು ಬಂದು ಕೊಟ್ಟಿಗೆಗೆ ಕೂಡುತ್ತಾರೆ. ಸರ್ವಜಯಾ ಹಣತೆಯನ್ನು ಹಚ್ಚಿ ತಂದು ತುಲಸಿಯ ಎದುರು ಇಡುತ್ತಾಳೆ. ಮುದುಕಿ ತುಲಸಿಗೆ ನಮಸ್ಕಾರ ಹಾಕುತ್ತಿದ್ದಾಳೆ.

ಕ್ಷಯವರ್ಧನ

ರಾತ್ರಿ. ಚಾವಡಿಯ ಮೇಲೆ, ಹರಿಹರ ಮತ್ತು ಅಪೂ ಅಕ್ಕಪಕ್ಕದಲ್ಲಿ ಕೂತಿದ್ದಾರೆ. ಹರಿಹರ ಲೆಕ್ಕ ಬರೆಯುವುದರಲ್ಲಿ ತೊಡಗಿಕೊಂಡಿದ್ದಾನೆ. ಅಪೂ ಓದಿಕೊಳ್ಳುತ್ತಿದ್ದಾನೆ. ಸ್ವಲ್ಪ ಮುಂದಕ್ಕೆ, ಅಡುಗೆಮನೆಯಲ್ಲಿ ತಾಯಿ ಕೂತಿದ್ದಾಳೆ.

ದುರ್ಗಾ, ಮುದುಕಿಯ ಚಾವಡಿಯ ಮೇಲೆ ಸುಮ್ಮನೆ ಕೂತಿದ್ದಾಳೆ. ಮುದುಕಿ ತನ್ನ ಗಂಟುಗಳನ್ನೆತ್ತಿಕೊಂಡು ಕೋಣೆಯ ಹೊರಗೆ ಬರುತ್ತಿದ್ದಾಳೆ. ಹೊರಗೆ ಬಂದು ಚಾವಡಿಯ ಮೇಲೆ ಕೂತು ಗಂಟುಗಳನ್ನು ಬಿಚ್ಚತೊಡಗುತ್ತಾಳೆ. ತಾಯಿ ಚಾವಡಿಯ ಹೊರಗೆ ಬಂದು ದುರ್ಗಾಳನ್ನು ಕರೆಯುತ್ತಾಳೆ. ಆಕೆ ಎದ್ದು ಬಂದ ಕೂಡಲೇ ಆಕೆಯ ಕೆನ್ನೆಗೆ ಬಾರಿಸುತ್ತಾಳೆ.

ಸರ್ವಜಯಾ— ತಲೆ ಯಾವಾಗ ಬಾಚಿಕೋತೀಯೆ ?

ಅಪೂ ಇದನ್ನು ಕಂಡು ಮುಗುಳ್ನಗುತ್ತಾನೆ. ದುರ್ಗಾ ಸಿಟ್ಟಿನಿಂದ ನಾಲಗೆ ಹೊರಚಾಚಿ, ಅವನನ್ನು ಅಣಕಿಸುತ್ತಾಳೆ. ಆಮೇಲೆ ತಲೆ ಬಾಚಿಸಿಕೊಳ್ಳಲು ಕೂರುತ್ತಾಳೆ

ಮುದುಕಿ, ಮಂದಬೆಳಕಿನಲ್ಲಿ ಸೂಜಿಯೊಳಕ್ಕೆ ದಾರ ಪೋಣಿಸಲು ವ್ಯರ್ಥಸಾಹಸ ನಡೆಸಿದ್ದಾಳೆ.

ದುರ್ಗಾ— ಅಮ್ಮಾ, ನಂಗೆ ನಾಲ್ಕು ಸೀಳಿನ ಜಡೆ ಹಾಕ್ತೀಯಾ ?

ಸರ್ವಜಯಾ— ಮಾತಾಡಬೇಡ, ಸುಮ್ನೆ ಕೂತ್ಕೊ.

ದುರ್ಗಾ— ರಾಣು ಅಕ್ಕನಿಗೆ ಬರತ್ತೆ.

ಸರ್ವಜಯಾ— ನಿನ್ನ ಕೂದಲು ಹೇಗಿದೆ ನೋಡು! ಎಣ್ಣೆ ಇಲ್ಲ. ಏನಿಲ್ಲ. ಇದರಲ್ಲಿ ಜಡೆ ಹಾಕೋಕೆ ಬರತ್ತಾ ?

ದುರ್ಗಾ— ಅಮ್ಮಾ, ನಿಂಗೆ ಗೊತ್ತಾ, ರಾಣು ಅಕ್ಕನ್ನ ನೋಡೋಕೆ ಬರ್‍ತಿದಾರಂತೆ.

ಅಪೂ— ಯಾರು ಬರ್‍ತಿದಾರೆ ?

ಮುದುಕಿ ಇಲ್ಲಿನ ಮಾತು ಕೇಳಲು ತಿರುಗುತ್ತಾಳೆ. ಅದೇ ಸಮಯಕ್ಕೆ ದೂರ ರೈಲಿನ ಸದ್ದು ಕೇಳಿ ಅಪೂ, ಆ ಕಡೆ ಗಮನಿಸತೊಡಗುತ್ತಾನೆ.

ಅಪೂ—ಅಕ್ಕ, ನೀ ರೈಲು ನೋಡಿದೀಯಾ ?

ದುರ್ಗಾ—ಹೂಂ.

ಸರ್ವಜಯಾ—ಯಾಕೆ ಸುಳ್ಳು ಹೇಳ್ತೀಯೋ ?

ಅಪೂ— ಅದು ಎಲ್ಲಿದೆ ಗೊತ್ತಾ ನಿಂಗೆ ?

ದುರ್ಗಾ— ಹೋ. ಮೊದಲು ಸೋನಾಡಂಗ ಬರತ್ತೆ. ಆಮೇಲೆ ಬತ್ತದ ಗದ್ದೆ. ಅದಾದಮೇಲೆ ರೈಲುರಸ್ತೆ ಬರತ್ತೆ.

ಅಪೂ— ಒಂದು ಸಲ ಕರಕೊಂಡು ಹೋಗ್ತೀಯಾ ?

ಹರಿಹರ— (ಅಪೂಗೆ) ಎಲ್ಲಿ ನೋಡೋಣ ಕೊಡು. (ಅವನು ಬರೆದದ್ದನ್ನು ನೋಡಿ) ಸರಿ, ಸರಿ. ಚೆನ್ನಾಗಿ ಬರೆದಿದೀಯೋ. ಈಗ, ಶ್ರೀ ಅನೋದನ್ನ ಬರಿ.

ಅಪೂಗೆ ಸ್ಲೇಟನ್ನು ವಾಪಸು ಕೊಡುತ್ತಾನೆ. ಅಪೂ ಬಾಗಿ ಬರೆಯುತೊಡಗುತ್ತಾನೆ. ದುರ್ಗಾ ಆಕಳಿಸುತ್ತಾಳೆ.

**ಕ್ಷೀಣನ**

**ವರ್ಧನ**

ಚಾವಡಿಯ ಮೇಲೆ ಸರ್ವಜಯಾ ಅಪೂನನ್ನು ಕೂಡಿಸಿಕೊಂಡು ಊಟ ಮಾಡಿಸುತ್ತಿದ್ದಾಳೆ. ಕೆಳಗೆ, ನಾಯಿ ನೋಡುತ್ತ ನಿಂತಿದೆ. ಅಪೂ ಊಟದ ನಡುವೆ, ಕೈಯಲ್ಲಿರುವ ಬಿಲ್ಲು ಬಾಣಗಳನ್ನು ಪ್ರಯೋಗಿಸಿ ನೋಡುತ್ತಿದ್ದಾನೆ.

ಸರ್ವಜಯಾ— ಇವತ್ತು ಪಾಠ ಚೆನ್ನಾಗಿ ಓದಿಕೊಂಡೆಯಾ ?

ಅಪೂ ಮಾತಾಡದೆ ಆಟದಲ್ಲೇ ಮಗ್ನನಾಗಿದ್ದಾನೆ.

ಸರ್ವಜಯಾ— ಶಾಲೇಲಿ ನೀನೇ ತುಂಬಾ ಚಿಕ್ಕೋನು ಅಲ್ವಾ ?<br>ಯಾರಾದರೂ ಅಣಕಿಸ್ತಾರಾ ?

ಅಪೂ ತಲೆಯಾಡಿಸುತ್ತಾನೆ. ಒಂದು ಬಾಣವನ್ನು ಬಿಟ್ಟು ಆಮೇಲೆ ಅದನ್ನು ಆಯ್ದು ತರಲು ಹೋಗುತ್ತಾನೆ. ತಾಯಿ ಅವನನ್ನೇ ಹಿಂಬಾಲಿಸಿ ಹೋಗುತ್ತಾಳೆ. ಆತ

ತಪ್ಪಿಸಿಕೊಳ್ಳುತ್ತಾನೆ, ಅದರಲ್ಲೇ ಮಗ್ನನಾಗುತ್ತಾನೆ. ಆಕೆ, ಕೈಯಲ್ಲಿ ತುತ್ತು ಹಿಡಿದು ಆತನ ಬೆನ್ನು ಹತ್ತುತ್ತಾಳೆ.

ಸರ್ವಜಯಾ— ನೋಡು, ಜಾಣ, ಬಾ. ಇದಿಷ್ಟು ಮುಗಿಸಿಬಿಡು. ಬಾ, ಬಾ, ತಟ್ಟೇಲಿ ಉಳಿಸಬಾರದು.

ಅಪೂ ಗಮನಕೊಡುವುದಿಲ್ಲ. ಆಕೆ, ತಟ್ಟೆಯ ಅನ್ನವನ್ನು ನಾಯಿಗೆ ಚೆಲ್ಲುತ್ತಾಳೆ.

ಸರ್ವಜಯಾ— ಬೇಡದಿದ್ರೆ ಬಿಡು, ಹೋಗ್ಲಿ. ಬಾಯಾದ್ರೂ ತೊಳ ಕೋತಿಯೋ ಇಲ್ಲೋ ?

ಅಪ್ಪೂ, ಈ ಕಡೆ ಗಮನವೇ ಇಲ್ಲದೆ, ಒಂದು ಬಾಣವನ್ನು ಬಿಟ್ಟು ಅದರ ಹಿಂದೆಯೇ ಬಾಗಿಲತನಕ ಓಡುತ್ತಾನೆ. ಅದೇ ಹೊತ್ತಿಗೆ ಬಾಗಿಲು ತಟ್ಟನೆ ತೆರೆದುಕೊಳ್ಳುತ್ತದೆ. ಶೇಜ್‌ಬೌ, ತುನು ಮತ್ತು ತೆಪ್ಪಿಯರನ್ನು ಕೂಡಿಕೊಂಡು ಪ್ರವೇಶಿಸುತ್ತಾಳೆ. ಸರ್ವ ಜಯಾ, ದುರ್ಗಾ ಬಂದಳೆಂದು ಭಾವಿಸಿ ತಿರುಗಿ ನೋಡುತ್ತಾಳೆ.

ಶೇಜ್‌ಬೌ— ದುರ್ಗಾ ಎಲ್ಲಿದಾಳೆ ? ಎಲ್ಲಿ ಆ ಹುಡುಗಿ ?

ತೆಪ್ಪಿ— ಅವಳ ಆಟದ ಪೆಟ್ಟಿಗೆ ತರಲಾ ನಾನು ?

ಶೇಜ್‌ಬೌ— ಹುಂ, ಮಗಳಿಗೆ ಇದೇನಾ ಕಲಿಸೋದು ?

ಸರ್ವಜಯಾ— ಏನಾಯಿತು ? ಏನಾಗಿದೆ ಅಂತ ಹೇಳಬಾರದಾ ?

ಶೇಜ್‌ಬೌ— ಕಳವು ಕಣೇ, ಕಳವು. ನಿನ್ನ ಮಗಳು ತುನುಳ ಮಣಿಸರ ಕದ್ದಿದ್ದಾಳೆ.

ಸರ್ವಜಯಾ— ಅವಳು ಕದ್ದಿದಾಳಾ ?

ಶೇಜ್‌ಬೌ—ಯಾಕೆ, ಭಾರೀ ಆಶ್ಚರ್ಯ ಆಗಿಬಿಡ್ತಾ? ಕದಿಯೋದೇನು ಬಂತು, ಅವಳು ಪಕ್ಕಾ ಕಳ್ಳರಿಗಿಂತ ಹೆಚ್ಚೇ ಆಗಿದಾಳೆ !

ತೆಪ್ಪಿ, ದುರ್ಗಾಳ ಆಟದ ಸಾಮಾನಿನ ಪೆಟ್ಟಿಗೆ ತರುತ್ತಾಳೆ. ಶೇಜ್‌ಬೌ ಅದರಲ್ಲಿ ಹುಡುಕುತ್ತಾ, ಒಳಗಿರುವುದನ್ನು ತೆಗೆದು ನೆಲಕ್ಕೆಸೆಯುತ್ತಿದ್ದಾಳೆ.

ಶೇಜ್‌ಬೌ— ಮೊನ್ನೆ ತಾನೆ ಅವಳಪ್ಪ ಪೇಟೆಯಿಂದ ಸರ ತಂದಿದ್ರು. ತುನು ಅದನ್ನ ನಿನ್ನ ಮಗಳಿಗೆ ತೋರಿಸಿದ್ಲು. ಅವಳು ಆ ಸರ ತಗೊಂಡು ಹಾಡೇ ಹಗಲೇ ಮಾಯವಾಗಿಬಿಟ್ಟಳಲ್ಲ. ನೋಡಿದಾಗಿನಿಂದ ಅದರ

ಮೇಲೆ ಕಣ್ಣಿಟ್ಟುಬಿಟ್ಟಿದ್ಲು.

ಸರ್ವಜಯಾ— ಅದರಲ್ಲಿರೋದಿಲ್ಲ ಬಿಡಿ, ಅವಳು ಇನ್ನೂ ವಾಪಸು ಬಂದಿಲ್ಲ. ಅವಳೇ ಕದ್ದಿರೋದು ಅಂತ ಹೇಗೆ ಹೇಳ್ತೀರಿ ?

ತುನು— ದುರ್ಗಾ ಹೇಳಿದ್ಲು........

ಶೇಜ್‌ಬೌ— ನೀ ಸುಮ್ನೆ ಇರು ಅನ್ನಲಿಲ್ವಾ ? ........ಇಲ್ಲನ್ನಮ್ಮ, ಹಾಗಾದ್ರೆ ನಾವೇ ನಮ್ಮ ವಸ್ತುನ ಮುಚ್ಚಿಟ್ಟುಕೊಂಡಿದೇವೆ !

ಸರ್ವಜಯಾ— ನಾ ಯಾಕೆ ಹಾಗೆ ಹೇಳಲಿ ? ಆದ್ರೆ, ಎಲ್ಲೋ ಆಟ ಆಡ್ತಿರೋವಾಗ ಬಿದ್ದುಹೋಗಿರಬಹುದಲ್ಲ.

ಶೇಜ್‌ಬೌ— ಇಲ್ಲ ಇಲ್ಲ. ನಾವು ಮೂಲೆ ಮೂಲೇನೆಲ್ಲಾ ಹುಡುಕಿ ನೋಡಿದೇವೆ. ಅದೆಲ್ಲಾ ಆದಮೇಲೆ ಈಗ ಇಲ್ಲಿ ಬರ್ತಿರೋದು.

ಈ ಮಾತುಕತೆಗಳು ನಡೆದಿರುವಾಗ, ಗೋಡೆಯ ಆಚೆ ತೂತಿನಲ್ಲಿ ದುರ್ಗಾ ಕಾಣಿಸಿಕೊಳ್ಳುತ್ತಾಳೆ. ಆಕೆಗೆ ಅಲ್ಲಿಂದ ಹಾಗೇ ಹೋಗಿಬಿಡುವಂತೆ ಅಪೂ ಗುಟ್ಟಾಗಿ ಸನ್ನೆ ಮಾಡುತ್ತಾನೆ. ಆದರೆ ದುರ್ಗಾ, ಮಾತುಗಳನ್ನಾಲೈಸುತ್ತ ಅಲ್ಲೇ ನಿಲ್ಲುತ್ತಾಳೆ. ಸರ್ವಜಯಾ ಅಪೂ ಸನ್ನೆ ಮಾಡುತ್ತಿರುವುದನ್ನು ಗಮನಿಸುತ್ತಾಳೆ. ತಕ್ಷಣ ದುರ್ಗಾಳನ್ನು ಕರೆಯುತ್ತಾಳೆ. ದುರ್ಗಾ, ಅಳಕುತ್ತ ಳಕುತ್ತ ಅವರೆದುರು ಬಂದು ನಿಲ್ಲುತ್ತಾಳೆ.

ಸರ್ವಜಯಾ— ತುನು ಸರ ತಗೊಂಡಿದೀಯಾ ?

ದುರ್ಗಾ ತಲೆಯಾಡಿಸುತ್ತಾಳೆ. ಶೇಜ್‌ಬೌ ಅವಳ ಮೇಲೆ ಏರಿಹೋಗುತ್ತಾಳೆ.

ಶೇಜ್‌ಬೌ— ತಗೊಂಡಿಲ್ಲಾ ?........

ಆಕೆ ಕೈಯೆತ್ತಿ ಇನ್ನೇನು ದುರ್ಗಾಳನ್ನು ಹೊಡೆಯಬೇಕೆಂದಿರುವಾಗ ತಾಯಿ ಮುಂದಾಗಿ ಮಧ್ಯೆ ಪ್ರವೇಶಿಸುತ್ತಾಳೆ.

ಸರ್ವಜಯಾ— ನೀವು ಯಾಕೆ ಹೊಡೆಯೋದು, ನಾನು ನೋಡ್ತೇನೆ.

ಸರ್ವಜಯಾ ಮಗಳ ಮಡಿಲು ಸೆರಗುಗಳನ್ನು ಹುಡುಕುತ್ತಾಳೆ. ಅದರಲ್ಲಿದ್ದ ಹುಣಿಸೆ ಬೀಜಗಳು ನೆಲಕ್ಕುದುರುತ್ತವೆ. ಹೊರಗಿನಿಂದ ಮುದುಕಿ, ಒಂದು ತೆಂಗಿನ ಹೆಡವನ್ನು ಎಳೆದುಕೊಳ್ಳುತ್ತ ಮನೆಗೆ ಪ್ರವೇಶಿಸುತ್ತಾಳೆ.

ಮುದುಕಿ— ಏನಾಯ್ತು ?

ಶೇಜ್‌ಬೌ— (ಸರ್ವಜಯಾಗೆ) ಈ ಹುಣಸೆಹಣ್ಣು ನಿಮ್ಮ ತೋಟದ್ದೇ ಅಲ್ಲವಾ?.... ದುರ್ಗಾ, ಅವನ್ನೆಲ್ಲಾ ಆರಿಸ್ಕೋ.

ಮುದುಕಿ— ಅಲ್ಲ, ಏನಾಯ್ತು ?

ಮುದುಕಿ ಸರ್ವಜಯಾಳನ್ನು ನೋಡಿ ಅನಂತರ ಶೇಜ್‌ಬೌಳನ್ನು ನೋಡುತ್ತಾಳೆ. ಇಬ್ಬರೂ ಆಕೆಯ ಕಡೆ ಗಮನ ಕೊಡದಿದ್ದಾಗ ಬೇಸರಗೊಂಡು ಮುಂದಕ್ಕೆ ನಡೆಯುತ್ತಾಳೆ. ಇಷ್ಟರಲ್ಲಿ ಸರ್ವಜಯಾ ದುರ್ಗಾಳ ಸೀರೆಯನ್ನೆಲ್ಲಾ ಹುಡುಕಿ, ಹುಣಿಸೆ ಬೀಜವಲ್ಲದೆ ಮತ್ತೇನೂ ಕಾಣದಾದಾಗ ಶೇಜ್‌ಬೌ ಕಡೆಗೆ ತಿರುಗುತ್ತಾಳೆ.

ಸರ್ವಜಯಾ— ಯಾರೋ ಬ್ದೋ ಗಿಡದಿಂದ ಹಣ್ಣು ಕಿತ್ಕೊಂಡು ಬರ್‍ತಾಳೆ. ಅದು ತಪ್ಪು ಅಂತ ನನಗೂ ಗೊತ್ತು. ಆದ್ರೆ ಅಷ್ಟೆಲ್ಲ ಬೆಲೆಬಾಳೋ ಸರ ಕದೀತಾಳೆ ಅಂತ ನೀವಾದ್ರೂ ಹೇಗೆ ಹೇಳ್ತೀರಿ ? ಹಣ್ಣಿನ ಮೇಲೆ ಯಾರದ್ದೇನೂ ಹೆಸರು ಕೆತ್ತಿರೋದಿಲ್ಲ. ಏನೋ ಹುಡುಗರು, ಎಲ್ಲಾದರೂ ಒಂದು ಹಣ್ಣು ಕದ್ದರೆ........

ಶೇಜ್‌ಬೌ— ಓ ಹೌದಾ ? ನನ್ನನ್ನೇ ಹೆದರಿಸ್ತೀಯೇ ನೀನು ; ಅಲ್ಲ, ಅವತ್ತು ನನ್ನ ಹತ್ತಿರ ರೂಪಾಯಿ ತಗೊಂಡೆಯಲ್ಲ, ಅವರ ಮೇಲೂ ಹೆಸರು ಕೆತ್ತಿರಲಿಲ್ಲ. ....ನೋಡು, ಆ ಹಣವಾದರೂ ಕೂಡ್ಲೆ ವಾಪಸು ಕೊಟ್ಟು ಬಿಡು. ನಂಗೆ ಇನ್ನೂ ಅದಕ್ಕಾಗಿ ಕಾಯ್ತಾ ಕೂತಿರೋಕೆ ಆಗೋದಿಲ್ಲ. ....ಹುಂ, ಹೋಗೋಣ. ....ನೋಡಮ್ಮಾ, ಆ ಸರ ಏನಾದ್ರೂ ಒಂದು ವೇಳೆ ಸಿಕ್ಕರೆ ವಾಪಸು ಕೊಡೋ ಕೃಪೆ ಮಾಡು.

ಈ ಮಾತುಗಳನ್ನಾಡುತ್ತ ಬಾಗಿಲ ಕಡೆ ನಡೆಯುತ್ತಾಳೆ. ತುನು ಹಿಂಬಾಲಿಸುತ್ತಾಳೆ. ಅವರು ಬಾಗಿಲು ದಾಟುತ್ತಿರುವಾಗ, ಅಲ್ಲಿ ಬಾಗಿಲಹೊರಗೆ, ಒಬ್ಬ ಹೆಂಗಸು ಈತನಕದ ಮಾತುಗಳನ್ನೆಲ್ಲ ಆಲೈಸುತ್ತ ನಿಂತಿದ್ದು ಕಾಣಿಸುತ್ತದೆ.

ಹೆಂಗಸು— ಏನ್ ಸಮಾಚಾರ ?

ಶೇಜ್‌ಬೌ—ನೋಡಿ, ನೋಡಿ. ಅದೊಂದು ಹುಡುಗಿ ಇರೋಕ್ಕೋಸ್ಕರ, ಗಿಡದಿಂದ ಒಂದು ಹಣ್ಣೂ ನೆಲಕ್ಕೆ ಬೀಳೋದಿಲ್ಲ. ನಾನು ಅದನ್ನ ಹೇಳೋಕೆ ಬಂದ್ರೆ ಈ ಮಹಾತಾಯಿ ನಂಗೇ ಕೊಂಕು ಆಡತಾಳೆ ! ಹಣ್ಣುಗಳ ಮೇಲೆ ಯಾರದ್ದೂ ಹೆಸರು ಕೆತ್ತಿರೋದಿಲ್ಲಂತೆ ! ಮಗು ಒಂದು ಹಣ್ಣು ಕದ್ದರೆ ಆಗೋದೇನು ಅಂತಾಳೆ. ತಾಯೀ ಹಾಗೆ

ಮಕ್ಕಳು ಅಲ್ವಾ ?........ ಎಲ್ಲಾ ಹಸೀ ಕಳ್ಳರು !

ಮಾತು ಕೇಳಿದ ತಾಯಿ ವಿಚಲಿತಗೊಳ್ಳುತ್ತಾಳೆ. ಆಕೆ ದುರ್ಗಾಳ ಕಡೆ ತಿರುಗಿ ನೋಡುತ್ತಾಳೆ. ದುರ್ಗಾ, ನೆಲಕ್ಕೆ ಬಿದ್ದಿರುವ ತನ್ನ ವಸ್ತುಗಳನ್ನು ಆಯ್ದು ಪೆಟ್ಟಿಗೆಗೆ ತುಂಬಿಕೊಳ್ಳುತ್ತಿದ್ದಾಳೆ.

ಸರ್ವಜಯಾ— ದುರ್ಗಾ, ಬಾ ಇಲ್ಲಿ........ ಇಲ್ಲಿ ಬಾ ಅಂದೆ !........
(ದುರ್ಗಾ ಚಲಿಸುವುದಿಲ್ಲ) ಏಳೋದಿಲ್ವಾ ? ಬರೋದಿಲ್ವಾ ?

ಸರ್ವಜಯಾ ಮುಂದಕ್ಕೆ ಬಂದು ದುರ್ಗಾಳ ಕೂದಲನ್ನು ಹಿಡಿದು ಆಕೆಯನ್ನು ಹೊಡೆಯತೊಡಗುತ್ತಾಳೆ. ಮುದುಕಿ ಮಧ್ಯೆ ಪ್ರವೇಶಿಸಲು ಹವಣಿಸುತ್ತಾಳೆ, ಸರ್ವಜಯಾ ಅದಕ್ಕೆ ಅವಕಾಶ ಕೊಡದಿದ್ದಾಗ, ಆಕೆ ನೋಡುತ್ತಾ ನಿಲ್ಲುತ್ತಾಳೆ. ಸರ್ವಜಯಾ ದುರ್ಗಾಳ ಕೂದಲು ಹಿಡಿದು ದರದರ ಎಳೆದುಕೊಂಡು ಬಾಗಿಲ ಬಳಿ ಹೋಗುತ್ತಾಳೆ ; ಅವಳನ್ನು ಹೊರಹಾಕಿ ಬಾಗಿಲು ಮುಚ್ಚುತ್ತಾಳೆ. ಆಮೇಲೆ, ತಟ್ಟನೆ ಬಾಗಿಲಿಗೊರಗಿ ತಾನೇ ನೆಲಕ್ಕೆ ಕುಸಿಯುತ್ತಾಳೆ. ಹೊರಗೆ, ದುರ್ಗಾ ಗಟ್ಟಿಯಾಗಿ ಅಳುತ್ತ ತತ್ತರಿಸುತ್ತಿದ್ದಾಳೆ. ಮುದುಕಿ ಹೆದರಿಕೊಂಡೇ ನೆಲದಮೇಲೆ ಬಿದ್ದಿರುವ ದುರ್ಗಾಳ ವಸ್ತುಗಳನ್ನು ಆಯುತ್ತಿದ್ದಾಳೆ. ಅಪೂ ಬಂದು ನಿಂತು ಭಯಗೊಂಡು ನೋಡುತ್ತಾನೆ ; ತಟ್ಟನೆ ವೇಗವಾಗಿ ಅಂಗಳದ ಮೂಲೆಗೆ ಓಡಿಹೋಗಿ ಕೈಬಾಯಿತೊಳೆದುಕೊಳ್ಳಲು ತೊಡಗುತ್ತಾನೆ.

## ಕ್ಷಯುವರ್ಧನ

ಮುದುಕಿ, ಅಂಗಳದಲ್ಲಿ ಒಣಗಿಸಿರುವ ಸೀರೆಗಳನ್ನು ಎತ್ತಿಕೊಳ್ಳುತ್ತಿದ್ದಾಳೆ. ಅಪೂ ಜಾವಡಿಯ ಮೇಲೆ ಕೂತು ಏನನ್ನೋ ಓದಿಕೊಳ್ಳುತ್ತಿದ್ದಾನೆ. ಬಾಗಿಲ ಬಳಿ ಇರುವ ತಾಯಿ, ಸೆರಗಿನಿಂದ ಮುಖ ಒರೆಸಿಕೊಳ್ಳುತ್ತ ಕೂಗುತ್ತಾಳೆ.

ಸರ್ವಜಯಾ—ಅಪೂ, ದುರ್ಗಾಗೆ ಊಟ ಹಾಕಿಟ್ಟಿದ್ದೇನೆ, ಅವಳನ್ನ ಕರೆ.

ಅಪೂ, ಪುಸ್ತಕದಲ್ಲಿ ತೊಡಗಿಕೊಂಡಿದ್ದ ಕಣ್ಣುಗಳನ್ನು ಮೇಲಕ್ಕೆತ್ತಿ ಮುಗುಳುನಗುತ್ತಾನೆ ; ಮೇಲಕ್ಕೆದ್ದು ಬಾಗಿಲ ಕಡೆ ಓಡುತ್ತಾನೆ.

ಹೊರಗೆ—ಅಪೂ ಅಚೆಯೀಚೆ ನೋಡುತ್ತ ಓಡುತ್ತಾನೆ.

## ಕ್ಷೀಣನ

(೬)

ವರ್ಷ

ರಾತ್ರಿ. ಮುದುಕಿ ಹೊರ ಚಾವಡಿಯ ಮೇಲೆ ಕೂತು ಅಪೂ ದುರ್ಗಾರಿಗೆ ಕಥೆ ಹೇಳುತ್ತಿದ್ದಾಳೆ. ಹರಿಹರ ದುರ್ಗಾಳನ್ನು ಕರೆಯುತ್ತಾನೆ.

ದುರ್ಗಾ— ಓ, ಅಪ್ಪ !.... (ಅಪೂಗೆ) ಹೋಗಿ ಬಾಗಿಲು ತೆಗೆ.

ಹರಿಹರ ಕೈಯಲ್ಲಿ ಒಂದು ಮೀನು ಹಿಡಿದು ಒಳಕ್ಕೆ ಬರುತ್ತಾನೆ.

ಹರಿಹರ— (ಅಪೂಗೆ) ಇದನ್ನ ಅಮ್ಮನಿಗೆ ತಗೊಂಡು ಹೋಗಿ ಕೊಡು. ನಾನು ಈಗ ಬಂದುಬಿಡ್ತೇನೆ—ಹೇಳು.

ದುರ್ಗಾ ಅಡುಗೆಮನೆಗೆ ಬಂದು ಉತ್ಸಾಹದಿಂದ ತಾಯಿಗೆ ಮೀನನ್ನು ತೋರಿಸುತ್ತಾಳೆ. ಆದರೆ ಸರ್ವಜಯಾ ಮುಂಕು ಕವಿದು ಕೂತಿದ್ದಾಳೆ. ಹರಿಹರನೇ ಬಂದು ಕರೆಯುವಾಗ ಆಕೆ ಚಲಿಸುತ್ತಾಳೆ.

ಹರಿಹರ— ಸ್ವಲ್ಪ ಇಲ್ಲಿ ಬಾ. ನಿನಗೆ ಹೇಳಬೇಕಾದ್ದು ತುಂಬಾ ಇದೆ.
ಸರ್ವಜಯಾ— ದುರ್ಗಾ, ಹಾಲು ನೋಡಿಕೋತಿರು.

ಚಾವಡಿಯ ಮೇಲೆ ಮುಖ ಒರೆಸಿಕೊಳ್ಳುತ್ತ ಕೂತಿರುವ ಹರಿಹರ ಮೇಲಕ್ಕೆದ್ದು ಆಕೆಯ ಕೈಗೆ ಒಂದು ಪೊಟ್ಟಣ ಕೊಡುತ್ತಾನೆ.

ಹರಿಹರ— ಜನ ಏನು ಬೇಕಾದರೂ ಹೇಳಬಹುದು. ಆದ್ರೆ, ರಾಯ್ ದೊಡ್ಡಪ್ಪ ಸಂಭಾವಿತ ಮನುಷ್ಯ. ಇಲ್ನೋಡು, ಮೂರು ತಿಂಗಳ ಸಂಬಳ. ಎಂಟ ಮೂರಲಿ ಇಪ್ಪತ್ತನಾಲ್ಕು ರೂಪಾಯಿಗಳು. ಲೆಕ್ಕ ಮಾಡು, ಅಷ್ಟರಲ್ಲಿ ನಾನು ಸಂಧ್ಯಾವಂದನೆ ಮುಗಿಸಿಬಿಡ್ತೇನೆ. ನಿನ್ನ ಹತ್ತಿರ ಹೇಳಬೇಕಾದ್ದು ತುಂಬಾ ಇದೆ.

ಕ್ಷಯವರ್ಷ

ರಾತ್ರಿ. ಅಡುಗೆಮನೆಯಲ್ಲಿ ಹರಿಹರ ಊಟ ಮಾಡುತ್ತಿದ್ದಾನೆ ; ಮಧ್ಯೆ ಮಧ್ಯೆ ಮಾತು ನಡೆದಿದೆ.

ಹರಿಹರ— ನಾನು ಸಂಬಳ ಕೇಳೋಕೆ ಹೋಗಿದ್ದಾಗ ಅಲ್ಲೇ ಒಬ್ಬ ಹೊಸಬ ಕಂಡ. ಚೆನ್ನಾಗಿದ್ದ. ಹಿಂದೆಲ್ಲೂ ಕಂಡಿರಲಿಲ್ಲ. ನೋಡಿದ ಕೂಡಲೇ ನನ್ನ ಕಾಲು ಹಿಡಿದುಕೊಂಡ. ನಿಮಗೆ ಗೊತ್ತಿಲ್ಲ, ನಿಮ್ಮ ತಂದೆಗೆ ಚೆನ್ನಾಗಿ ಗೊತ್ತಿತ್ತು —ಅಂದ. ಆತ ಅದಾವುದೋ ವ್ರತಗಳಿಗಾಗಿ ನಮ್ಮ ಮನೇಗೆ ಬರ್ತಿದ್ದನಂತೆ. ಹೆಸರು ಕೇಳಿದೆ. ಮಹೇಶ ಬಿಷೂ— ಅಂದ. ನನ್ನಿಂದ ಏನು ಆಗ್ಬೇಕು ಅಂತ ಕೇಳಿದೆ. ನನಗೆ ವ್ರತೋಪದೇಶ ಪಡೀಬೇಕು, ನೀವು ಉಪದೇಶ ಕೊಡೋದಾದ್ರೆ ಉಪಕಾರ— ಅಂದ. ತುಂಬ ಶ್ರೀಮಂತ ಅಂತ ಕಾಣುತ್ತೆ.

ಸರ್ವಜಯಾ— ನೀವು ಒಪ್ಪಿಕೊಂಡ್ರಾ ?

ಹರಿಹರ— ಒಪ್ಪಿಕೊಂಡೆ ಅಂತ ಕನಸು ಕಂಡುಬಿಟ್ಟೆಯಾ ?

ಸರ್ವಜಯಾ— ನಮ್ಮ ತೊಂದರೇಲಿ ಮತ್ತೇನು ಮಾಡೋದು ?

ಹರಿಹರ— ಅಲ್ಲ ನೋಡು. ಅದು ತುಂಬಾ ಕಷ್ಟವಾಗುತ್ತೆ. ಜನಕ್ಕೆ ಗೊತ್ತಾದ್ರೆ, ಯಾರಯಾರಿಗೋ ಉಪದೇಶ ಕೊಟ್ಟ ಅಂತ ಆಡಿಕೋತಾರೆ.

ಸರ್ವಜಯಾ— ಜನಕ್ಕೆ ಹೇಗೆ ಗೊತ್ತಾಗತ್ತೆ.

ಹರಿಹರ— ಹೇಗೆ ಹೇಳೋದು ? ಅಲ್ಲ ಒಮ್ಮೆ ನೀನೇ ಬಾಯಿಬಿಟ್ಟು ಬಿಡಬಹುದು........ ಹೆಂಗಸರ ಸ್ವಭಾವ ನೋಡು........

ಸರ್ವಜಯಾ— ನಂಗೆ ಬೇರೆ ಕೆಲಸ ಇಲ್ವಾ? ನಾನು ಅದನ್ನೇ ಹೇಳ್ತಾ ಹೋಗ್ತೇನಾ ?

ಹರಿಹರ— ಅದ್ಯಾಕೆ ಸಿಟ್ಟು ಮಾಡ್ತಾ ಇದೀಯಾ ? ಅವನು ಬೆನ್ನು ಹತ್ತಿದಾನೆ, ನನ್ನ ಬಿಡೋದಿಲ್ಲ. ಇರಲಿ. ಅದೆಲ್ಲಾ ಪೂಜಾ ಮುಗಿದ ಮೇಲೆ ನಿಶ್ಚಯ ಮಾಡಿದರಾಯ್ತು. ಮುಂದಿನ ಎರಡು ತಿಂಗಳು, ಈಗಿರೋ ಹಣದಲ್ಲಿ ಹೇಗೋ ಮುಗಿಸು. ಪೂಜಾ ಹೊತ್ತಿಗಾದರೂ ದುರ್ಗಾ ಮತ್ತು ಅಪೂಗೆ ಬಟ್ಟೆ ತರಬೇಕು. ದೀದಿಗೆ ಒಂದು ಶಾಲು ತರಬೇಕು. ಈ ಹಣ ಸಾಕಾಗಬಹುದು.

ಸರ್ವಜಯಾ— ನಾನು ಹೇಗೂ ಶೇಜ್ ದೊಡ್ಡಮ್ಮನ ಹಣ ವಾಪಸು ಕೊಡಲೇ ಬೇಕು.

ಹರಿಹರ— ಆಗಲಿ, ಈ ಹಣದಲ್ಲಿ ಅದನ್ನ ಕೊಟ್ಟುಬಿಡು. ನನ್ನ ಬೇರೆ ಸಾಲಗಳನ್ನು ಎರಡು ತಿಂಗಳು ಬಿಟ್ಟು ಕೊಟ್ಟರೂ ನಡೆಯುತ್ತೆ.

ಸರ್ವಜಯಾ— ಮನೆ ಏನು ಮಾಡ್ತೀರಿ?

ಹರಿಹರ— ಅದೇನಿದ್ರೂ ಪೂಜಾ ಆದಮೇಲೆ. ಮಳೆಗಾಲ ಹೇಗೂ ಕಳೆದಾಯ್ತು. ಈ ತಿಂಗಳು ಅಜಯ್ ಮೇಸ್ತ್ರಿಗೆ ಹೇಳ್ತೀನೆ, ಖರ್ಚು ಎಷ್ಟಾಗುತ್ತೆ ಅಂತ ಲೆಕ್ಕ ಹಾಕೋಕೆ.

ಸರ್ವಜಯಾ— ಏನಾದರಾಗಲಿ, ಮೊದಲು ಅಡುಗೆ ಮನೆಯೊಂದು ಮಾಡಿಸಿಕೊಟ್ಟುಬಿಡಿ. ಉಳಿದದ್ದು ಬೇಕಾದ್ರೆ ಆಮೇಲೆ ನೋಡ ಬಹುದು.

ಹರಿಹರ— ಹೌದು, ಎಲ್ಲಾ ಮಾಡಿಸೋಣಂತೆ. ಅಡುಗೆಮನೆ, ಕೊಟ್ಟಿಗೆ, ಪಾಗಾರ— ಎಲ್ಲಾ ಮಾಡಿಸೋಣ. ಯೋಚಿಸಬೇಡ.

ಮತ್ತೊಂದು ಭಾಗದಲ್ಲಿ ದುರ್ಗಾ ಮತ್ತು ಅಪ್ಪೂ, ಚಾವಡಿಯ ಮೇಲೆ ನಡೆದು ಮಲಗುವ ಕೋಣೆಗೆ ಹೋಗುತ್ತಾರೆ. ಇಬ್ಬರೂ ಹಾಸಿಗೆಯ ಮೇಲೆ ಮಲಗುತ್ತಾರೆ. ದುರ್ಗಾ ಕಿಟಕಿ ತೆರೆಯುತ್ತಾಳೆ.

ಅಪ್ಪೂ— ಪೂಜಾಗೆ ಇನ್ನೂ ಎಷ್ಟು ದಿನ ಇದೆ?

ದುರ್ಗಾ— ಇಪ್ಪತ್ತೊಂದು ದಿನ.

ಅಪ್ಪೂ ದೀಪ ಆರಿಸುತ್ತಾನೆ. ಇಬ್ಬರೂ ಕತ್ತಲಲ್ಲಿ ಮಲಗುತ್ತಾರೆ.

ಅಪ್ಪೂ—ಅಕ್ಕಾ, ಅಕ್ಕಾ, ನೀನು ತುನುದೀದಿಯ ಸರ ತಗೊಂಡಿದೀಯಾ?

ದುರ್ಗಾ— ನಿನಗೆ ಹುಚ್ಚು ಹಿಡೀತಾ?

ಅಪ್ಪೂ— ಮತ್ತೆ ಯಾರು ತಗೊಂಡಿದಾರೆ?

ದುರ್ಗಾ— ಗೊತ್ತಿಲ್ಲ, ನಿದ್ದೆ ಮಾಡು.

## ಕ್ಷಯವರ್ಧನ

ಹರಿಹರ ಹಾಸಿಗೆ ಸಿದ್ಧಗೊಳಿಸುತ್ತಿದ್ದಾನೆ. ಹತ್ತಿರದಲ್ಲಿ ಸರ್ವಜಯಾ ಹೊಲಿಯುತ್ತ ಕೂತಿದ್ದಾಳೆ.

ಹರಿಹರ—ಒಂದು ಹೊಸಾ ನಾಟಕಕ್ಕೆ ವಸ್ತು ಹೊಳೆದಿದೆ. ಇನ್ನೊಂದು ವಾರದಲ್ಲಿ ಅದನ್ನ ಪೂರೈಸಿಬಿಡ್ತೀನೆ.

ಸರ್ವಜಯಾ— ಇಲ್ಲಿ ಕೇಳಿ.... ನೀವು ಬನಾರಸ್‌ನಲ್ಲಿ ತುಂಬ ದಿನ ಇದ್ದಿರಿ....

ಹರಿಹರ— ಹೌದು.

ಸರ್ವಜಯಾ— ಅಲ್ಲಿ ನಿಮಗೆ ಎಲ್ಲರೂ ಗೊತ್ತಾ ?

ಹರಿಹರ— ಕೆಲಕೆಲವರು ಗೊತ್ತು.

ಸರ್ವಜಯಾ— ಅಲ್ಲಿ ಸಂಸ್ಕಾರ ನಡೆಸ್ತಾರಲ್ಲ, ಯಾವ ನದಿ ದಡ ಅದು?

ಹರಿಹರ—ದಶಾಶ್ವಮೇಧ ಘಾಟ್.

ಸರ್ವಜಯಾ— ಅಲ್ಲಿರೋರು ತುಂಬಾ ದುಡೀತಾರಲ್ವ ?

ಹರಿಹರ— ಹೌದು.

ಸರ್ವಜಯಾ— ಹಾಗಾದರೆ ನಾವು ಅಲ್ಲೇ ಹೋಗೋಣ.

ಹರಿಹರ—ಆಗೋದಿಲ್ಲ.

ಸರ್ವಜಯಾ— ಯಾಕೆ ಆಗೋದಿಲ್ಲ ?

ಹರಿಹರ— ಅದು ಹೇಗೆ ಆಗತ್ತೆ ? ಈ ಮನೇಗೆ ಬರಬೇಕು ಅಂತಾನೇ ಬನಾರಸ್ ಬಿಟ್ಟು ಬಂದೆ. ಈಗ ಮತ್ತೆ ಅಲ್ಲಿಗೇ ಹೋಗೋದು ಹೇಗೆ? ........ ಸಾಧ್ಯ ಇಲ್ಲ.

ಸರ್ವಜಯಾ— ಯಾಕೆ ಆಗೋಲ್ಲ ? ಆಗ, ಎಂಟು ವರ್ಷ ನೀವು ಅಲ್ಲೇ ಇದ್ದಿರಿ, ನನ್ನ ತಾಯಿ ಮನೆಯಲ್ಲಿ ಬಿಟ್ಟು. ಒಂದು ಕಾಗದ ಕೂಡಾ ಬರೆದಿರಲಿಲ್ಲ.

ಹರಿಹರ— ನಿನ್ನ ಪರಿಚಯಾನೇ ಇರಲಿಲ್ವಲ್ಲ ಆಗ ?........ ಇಲ್ಲದಿದ್ರೆ ಕಾಗದ ಬರೀದೆ ಇರತಿದ್ದೆನಾ ?

ಸರ್ವಜಯಾ— ನೀವು ಅಷ್ಟೆಲ್ಲಾ ಕಲಿತದ್ದು ಏನು ಪ್ರಯೋಜನ ಆಯ್ತು ? ವಂಶಪಾರಂಪರ್ಯದ ಮನೆ ಅಂತೀರಿ. ಇದು ನಿಮಗೆ ಹೇಗೋ ಹಾಗೇ ನನಗೂ ವಂಶಪಾರಂಪರ್ಯದ್ದೇ. ಆದರೆ ಎಂಥಾ ಮನೆ! ಕಾಡಿನ ಮಧ್ಯೆ.... ಸೂರ್ಯ ಮುಳುಗಿದರೆ ಸಾಕು, ಆ ಕ್ಷಣಕ್ಕೆ ನರಿಗಳು ಹೊಸಲಿಗೇ ಬರ್ತಾವೆ. ಏನೋ ಎದೆ ಬಿಚ್ಚಿ ಮಾತಾಡೋಣ ಅಂದರೂ ಎಡ ಬಲದಲ್ಲಿ ಬೇಕಾದ ಜನ ಇಲ್ಲ. ನೀವಂತೂ ಮನೇಲಿ ಇರೋದಿಲ್ಲ. ನನಗೆ ಎಷ್ಟು ಭಯ ಆಗತ್ತೆ ಅಂತ ನಿಮಗೆ ತಿಳಿಯೋದಿಲ್ಲ.... ನಿಮಗೆ ಅಲ್ಲಿ ಎರಡು ಊಟ ಸಿಕ್ಕತ್ತೆ. ಇನ್ನು, ಸಂಬಳ ಸಿಗುತ್ತೊ ಇಲ್ವೋ

ಅಂತ ನೀವೇಕೆ ಯೋಚನೆ ಮಾಡ್ತೀರಿ.... ನನಗೆ ಏನೇನು ಆಸೆಗಳೆಲ್ಲಾ ಇದ್ದವು—ಅದು ಮಾಡ್ತೇನೆ ಇದು ಮಾಡ್ತೇನೆ........

ಮುದುಕಿ ಚಾವಡಿಯ ಮೇಲೆ ಕೂತು ಬೆಳದಿಂಗಳಿನಲ್ಲಿ ತನ್ನಷ್ಟಕ್ಕೆ ಹಾಡಿಕೊಳ್ಳುತ್ತಿದ್ದಾಳೆ.

ಮುದುಕಿ— (ಹಾಡು)

ಕ್ಷೀಣನ

(೭)

ವರ್ಧನ

ದುರ್ಗಾ ಮತ್ತು ಆಕೆಯ ಗೆಳತಿಯರು ಕೂಡಿ, ಕಾಡಿನ ಮಧ್ಯೆ ವನಭೋಜನದ ತಯಾರಿ ನಡೆಸಿದ್ದಾರೆ. ಅಡುಗೆ ಕೆಲಸ ನಡೆದಿದೆ.

ದುರ್ಗಾ— ಏ ಅಪೂ, ಬೇಗ ಹೋಗಿ ಕಟ್ಟಿಗೆ ತಗೊಂಡು ಬಾ. ಈ ಕಟ್ಟಿಗೆ ಒದ್ದೆಯಾಗಿದೆ. ಬೆಂಕಿ ಹತ್ತೋದಿಲ್ಲ.

ಉಳಿದ ಹುಡುಗಿಯರು ದುರ್ಗಾ ಜೊತೆ ಅಡುಗೆಯಲ್ಲಿ ತೊಡಗಿದ್ದಾರೆ.

ಮುದುಕಿ ಅಲ್ಲೇ ರಸ್ತೆಯಲ್ಲಿ ನಡೆದು ಬರುತ್ತಿದ್ದಾಳೆ. ಹೊಸ ಶಾಲು ಹೊದೆದುಕೊಂಡಿದ್ದಾಳೆ. ಆಕೆ ಹೋಗುತ್ತಿರಲು, ಆಟವಾಡುತ್ತಿರುವ ಮಕ್ಕಳ ಒಂದು ಗುಂಪಿನ ಒಬ್ಬ ಹುಡುಗಿ ಆಕೆಯನ್ನು ಕರೆಯುತ್ತಾಳೆ.

ಹುಡುಗಿ— ಠಾಕೂರ್ ಮಾ, ಮದುವೆ ಮಾಡ್ಕೋತೀಯಾ ?

ಮುದುಕಿ— ಹುಚ್ಚು ಮಾತಾಡಬೇಡ. ನಿನ್ನ ಅಮ್ಮ ಎಲ್ಲಿದಾಳೆ ?

ಹುಡುಗಿ— ಅಲ್ಲಿ ಘಾಟ್‌ನಲ್ಲಿದಾಳೆ.

ಅಪೂ ಕಟ್ಟಿಗೆ ತೆಗೆದುಕೊಂಡು ಬರುತ್ತಿದ್ದಾನೆ. ಅಲ್ಲೇ ಒಂದು ಮರದ ಕೊಂಬೆಯನ್ನು ಹತ್ತಿ ಕೂತಿರುವ ಒಬ್ಬ ಹುಡುಗನ ಕಡೆ ದುರ್ಗಾ ನೋಡುತ್ತಾಳೆ.

ದುರ್ಗಾ— ಹೇ, ಉಮಿ, ನೀನು ಬರ್ತೀಯಾ ಊಟಕ್ಕೆ ?

ಒಬ್ಬ ಹುಡುಗಿ— (ಅಪೂಗೆ) ಕಟ್ಟಿಗೆ ಅಲ್ಲೇ ಇಡು.

ದುರ್ಗಾ— (ಅಪೂಗೆ) ಅಪ್ಪ ಎಲ್ಲಿದಾನೆ ? (ಹುಡುಗನಿಗೆ) ಮರದಿಂದ ಇಳಿದು ಬಾ. ಹುಂ. ಕೆಳಗಿಳಿ.

ಮುದುಕಿ ಈಗ ಘಾಟ್‌ನ ಬಳಿಗೆ ಬಂದಿದ್ದಾಳೆ. ಅಲ್ಲಿಂದ ಹಿಂತಿರುಗುತ್ತಿರುವ ಒಬ್ಬ ಹೆಂಗಸು ಆಕೆಯನ್ನು ಮಾತಾಡಿಸುತ್ತಾಳೆ.

ಹೆಂಗಸು— ಪಿಶಿ ಮಾ, ಆ ಶಾಲು ಯಾರು ಕೊಟ್ಟರು ?

ಮುದುಕಿ— ಅದೇ, ಆಚೆ ಊರಿನ ರಾಜು ಇದಾನಲ್ಲ, ಅವನು ಕೊಟ್ಟ. ನವಾಬ್‌ಗಂಜ್‌ನಿಂದ ತಗೊಂಡು ಬಂದನಂತೆ. ಒಂಬತ್ತೂವರೆ ಆಣೆ ಕ್ರಯ.

ಹೆಂಗಸು— ಚೆನ್ನಾಗಿ ಕಾಣತ್ತೆ ನಿಂಗೆ.

ಮಕ್ಕಳ ವನಭೋಜನ ನಡೆಯುತ್ತಿರುವಲ್ಲಿಗೆ ರಾಣು ಬರುತ್ತಾಳೆ.

ತೆಪ್ಪಿ— ಅಕ್ಕ ಬಂದ್ಲು.

ದುರ್ಗಾ— ಹ್ಯಾಗೆ ಬಂದೆ ? ಶೇಜೋ ದೊಡ್ಡಮ್ಮ ಮನೇಲಿರಲಿಲ್ವಾ?

ಒಬ್ಬ ಹುಡುಗಿ— ಶಾಂತಿ, ಏನು ಅಡುಗೆ ಮಾಡ್ತಿದೀಯೆ ?

ದುರ್ಗಾ— ಕಿಚಡಿ. ಇಲ್ನೋಡು—ಅಕ್ಕಿ, ಆಲೂಗಡ್ಡೆ, ಬದನೆಕಾಯಿ, ಮೆಣಸಿನಕಾಯಿ, ಎಣ್ಣೆ.

ರಾಣು— ಎಲ್ಲಿ ನೋಡೋಣ.... ಓ, ಹೌದಲ್ಲ.

ದುರ್ಗಾ— ತೆಪ್ಪಿ, ಉಪ್ಪು ತರಲಿಲ್ವಾ ?

ತೆಪ್ಪಿ— ಇಲ್ಲ, ನಂಗೆ ಉಪ್ಪು ತರೋಕೆ ಹೇಳಿರಲಿಲ್ಲ, ಎಣ್ಣೆ ತರೋಕೆ ಹೇಳಿದ್ದೆ. ಉಪ್ಪು ನೀನೇ ತರ್ತೀನೆ ಅಂದಿದ್ದೆ.

ಇಬ್ಬರು ಹುಡುಗಿಯರೂ ಜಗಳವಾಡತೊಡಗುತ್ತಾರೆ, **ರಾಣು**, ತಾನೇ ತರುವುದಾಗಿ ಹೇಳಿ ಇಬ್ಬರನ್ನೂ ಸಮಾಧಾನಗೊಳಿಸಿ ಓಡುತ್ತಾಳೆ.

**ಕ್ಷಯುವರ್ಧನ**

ಸರ್ವಜಯಾ, ಚಿತ್ರದ ಪೆಟ್ಟಿಗೆಯೊಳಕ್ಕೆ ಸಾಮಾನು ತುಂಬುತ್ತಿದ್ದಾಳೆ. ಸುತ್ತ

ನೋಡುತ್ತಾಳೆ. ಬಾಗಿಲು ತೆರೆಯುತ್ತದೆ. ಮುದುಕಿ ಒಳಗೆ ಬರುತ್ತಾಳೆ.

ಸರ್ವಜಯಾ— ಥಾಕೂರ್‌ಜಿ, ಇಲ್ಲಿ ಬನ್ನಿ, ಕೇಳಿ....

ಮುದುಕಿ— (ನಿಧಾನ ಅವಳ ಹತ್ತಿರ ಬರುತ್ತ) ಏನು ?

ಸರ್ವಜಯಾ— ಆ ಶಾಲು ಎಲ್ಲಿಂದ ತಗೊಂಡು ಬಂದ್ರಿ ?

ಮುದುಕಿ— (ಮಾತು ನುಂಗುತ್ತ) ರಾಜು ಕೊಟ್ಟ.

ಸರ್ವಜಯಾ— ಹಾಗಂದ್ರೆ ? ಅವನೇ ಕೊಟ್ಟನಾ ? ನೀವು ಕೇಳದೆ ತಾನಾಗಿಯೇ ಕೊಟ್ಟನಾ ?

ಮುದುಕಿ— ನಾ ಯಾಕೆ ಕೇಳೋಕೆ ಹೋಗ್ತೇನೆ ? ....ಮುದಿ ಮೈ. ಸಾಯಂಕಾಲವಾದ್ರೆ ತಡಿಯೋಕಾಗದಷ್ಟು ಚಳಿ ಆಗತ್ತೆ. ಅದಕ್ಕೆ....

ಸರ್ವಜಯಾ— ಒಳ್ಳೇದು. ಹಾಗಾದ್ರೆ ಅವನೇ ಯಾಕೆ ನಿಮಗೆ ಜಾಗ ಕೊಟ್ಟು ಇಟ್ಟುಕೊಂಡು ಊಟ ಹಾಕಬಾರದು ?

ಮುದುಕಿ— ನೋಡು, ನಾನು ಹರೀನೇ ಕೇಳಿದೆ. ಒಂದು ಶಾಲು ಕೊಡು ಅಂತ.

ಸರ್ವಜಯಾ— ಅವರು ಇಲ್ಲ ಅಂದಿದ್ರಾ ? ನೀವು ಬೇಡತಾ ಹೋದದ್ದು ಯಾಕೆ ? ನಾಚಿಕೆಯಾದರೂ ಆಗೋದಿಲ್ವಾ ? ಹೀಗೆ ಮಾಡಿದ್ರೆ ಜನ ಏನು ತಿಳ್ಕೋತಾರೆ ?....

ಮುದುಕಿ— ಹೌದಮ್ಮಾ ನಾ ಮುದುಕಿ. ಆದ್ರೆ ಮುದುಕಿಯಾದ್ರೂ ಆಶೆಗಳಿರುತ್ತವೆ, ನೋಡು.

ಸರ್ವಜಯಾ— ಹೌದು, ನಿಮಗೆ ಆಸೆ ಇರತ್ತೆ. ಇಲ್ಲಿ ನಾ ಕೊಡೋ ದನ್ನ ಊಟ ಮಾಡ್ತೀರಿ, ಆದ್ರೂ ಆಸೆ ಇರತ್ತೆ. ನನ್ನ ಮಕ್ಕಳಿಗೇ ಎರಡು ಹೊತ್ತು ಊಟ ಕೊಡೋಕೆ ಆಗೋಲ್ಲ ನಮಗೆ ಅನ್ನೋದು ನಿಮಗೆ ತಿಳಿಯೋಲ್ವಾ ? ಅವಕ್ಕೂ ಆಸೆ ಆಗೋಲ್ವಾ.... ನೋಡಿ, ನೀವು ಇಲ್ಲಿ ಊಟ ಮಾಡ್ಕೊಂಡು ಕಂಡಲ್ಲೆಲ್ಲಾ ಬೇಡ್ತಾ ಹೋಗ್ತೀರಿ ! .... ನಾ ಅದಕ್ಕೆಲ್ಲಾ ಬಿಡೋದಿಲ್ಲ. ನಿಮಗೆ ಹಾಗೆ ಅಷ್ಟೆಲ್ಲಾ ಆಸೆ ಯಿದ್ರೆ ಯಾವಾದ್ದೂ ಬೇರೆ ಜಾಗ ನೋಡ್ಕೊಳ್ಳಿ.

ಮಾತಾಡುತ್ತಲೇ ಆಕೆ ಬುಟ್ಟಿಯನ್ನೆತ್ತಿಕೊಂಡು ಮನೆಯೊಳಕ್ಕೆ ನಡೆಯುತ್ತಾಳೆ.

ಮುದುಕಿ— ನಾ ಇಲ್ಲಿರೋದು ಬೇಡ ಅಂತಾದ್ರೆ ಹಾಗೆ ಬಾಯಿಬಿಟ್ಟು

ಹೇಳು. ಯಾಕೆ ಕೊಂಕು ಮಾತು ಆಡ್ತೀಯ? ನಂಗೇನು ಬೇರೆ ಜಾಗವೇ ಇಲ್ವಾ?

ಸರ್ವಜಯಾ— ಸರಿ, ಆ ಜಾಗಕ್ಕೇ ಹೋಗಬಹುದಲ್ಲ. ಹೊರಟುಬಿಡಿ. ಕೂಡಲೇ ಹೊಂಟುಬಿಡೋದೇ. ಈ ಕ್ಷಣಾನೇ ಹೊರಟುಬಿಡಿ.

ತಾಯಿ ಉದ್ವೇಗಗೊಂಡು ಕೆಮ್ಮುತ್ತ ಕೆಳಕ್ಕೆ ಕುಸಿಯುತ್ತಾಳೆ. ಕೈಯಲ್ಲಿದ್ದ ಬುಟ್ಟಿ ಪಾತ್ರೆಗಳು ನೆಲದಮೇಲೆ ಉರುಳುತ್ತವೆ. ಮುದುಕಿ ಬೆಂಗಾಗಿ ನೋಡುತ್ತಾಳೆ; ಕಾತರ ದಿಂದ ಮೆಲ್ಲಗೆ ಸರ್ವಜಯಾಳ ಬಳಿಗೆ ಬರುತ್ತಾಳೆ.

ಮುದುಕಿ— ಏನಾಯ್ತು?

ಸರ್ವಜಯಾ— ನಿಮಗ ಎಲ್ಲಿ ಬೇಕೋ ಅಲ್ಲೇ ಹೋಗಿ. ಇಲ್ಲಂತೂ ಇರೋಕಾಗೋದಿಲ್ಲ.

ಮುದುಕಿ ಸರ್ವಜಯಾಳ ತಲೆ ತಟ್ಟುತ್ತ ಆಕೆಯ ಕೆಮ್ಮನ್ನು ಸಮಾಧಾನಗೊಳಿಸಲು ಯತ್ನಿಸುತ್ತಿದ್ದಾಳೆ. ಆಕೆಯ ಒರಟು ಮಾತುಗಳನ್ನು ಕೇಳಿ ಬೇಸರಗೊಂಡು ಹಿಂದಕ್ಕೆ ಸರಿಯುತ್ತಾಳೆ. ಸರ್ವಜಯಾ ಕೆಳಕ್ಕೆ ಉರುಳಿದ ಪಾತ್ರೆಗಳನ್ನು ಎತ್ತಿಕೊಳ್ಳಲು ತೊಡಗುತ್ತಾಳೆ.

## ಕ್ಷಯುವರ್ಧನ

ವನಭೋಜನ ನಡೆದಿದೆ. ರಾಣು ಮತ್ತು ದುರ್ಗಾ ಅಕ್ಕಪಕ್ಕದಲ್ಲಿ ಕೂತು ತಿನ್ನುತ್ತಿ ದ್ದಾರೆ; ಮಾತಾಡುತ್ತಿದ್ದಾರೆ.

ದುರ್ಗಾ— ತುಂಬಾ ರುಚಿಯಾಗಿದೆ. ನಿನ್ನ ಗಂಡ ನಿನ್ನ ಅಡುಗೇನ ಭಾರೀ ಮೆಚ್ಚಿಕೋತಾನೆ, ನೋಡು.

ರಾಣು— ಸಾಕು ಸುಮ್ನಿರು.

ದುರ್ಗಾ— ನಿನ್ನ ಮದುವೆಗೆ ಎಷ್ಟು ದಿನ ಉಳೀತು.

ರಾಣು—ನಂಗೊತ್ತಿಲ್ಲ.

ದುರ್ಗಾ— ನಂಗೆ ಗೊತ್ತು, ಹೇಳಲಾ?

ರಾಣು— ಹೇಳು.

ದುರ್ಗಾ— ಎರಡು ತಿಂಗಳು ಹತ್ತು ದಿನ. ನಿಂಗೆ ಏನು ಅನ್ನಿಸತ್ತೆ ?

ರಾಜು— ಎಲ್ಲರಿಗೂ ಅನ್ನಿಸೋ ಹಾಗೇ.

ದುರ್ಗಾ— ಹಾಗಂದ್ರೆ ?

ರಾಜು— ಮುಂದಕ್ಕೆ, ನಿಂದೇ ಆದಾಗ ನಿಂಗೇ ಗೊತ್ತಾಗತ್ತಲ್ಲ.

ದುರ್ಗಾ— ನಂಗೆ ಆಗೋದೇ ಇಲ್ಲ.

ರಾಜು— ಯಾಕೆ, ಆಗೇ ಆಗತ್ತೆ.

ದುರ್ಗಾ— ನಂಗೆ ಗೊತ್ತು.... ನಂಗೆ ಮದುವೆ ಆಗೋದೇ ಇಲ್ಲ.

ರಾಜು— ಆಗೇ ಆಗತ್ತೆ. ನಿಂಗೆ ಹುಡುಗನ್ನ ಹುಡುಕ್ತಾ ಇದಾರೆ.

ದುರ್ಗಾ— ನಿನ್ನ ತಲೆ.

ರಾಜು— ಇಲ್ನೋಡು....

ದುರ್ಗಾ ಕಣ್ಣೆತ್ತಿ ನೋಡಿದಾಗ, ಹುಡುಗರ ಒಂದು ಗುಂಪು ಕೂಗುತ್ತಾ ಓಡಿಹೋಗುತ್ತದೆ.

ಹುಡುಗರು ಫೌಟ್‌ನ ಮೇಲೆ ನಿಂತುಕೊಂಡಿರುವ ಮುದುಕಿಯನ್ನು ನೋಡದೆ ಹಾಗೇ ಮುಂದಕ್ಕೆ ಓಡುತ್ತಾರೆ.

ಕ್ಷಯವರ್ಧನ

ಮುದುಕಿ, ಹೊರಬಾಗಿಲಿನಿಂದ ರಾಜುವಿನ ಮನೆಯ ಅಂಗಳದೊಳಕ್ಕೆ ಪ್ರವೇಶಿಸುತ್ತಾಳೆ.

ಮುದುಕಿ— ರಾಜು, ರಾಜು ಇದೀಯಾ ?

ರಾಜು— ಯಾರದು ?

ಮುದುಕಿ— ನಾನೇ. ನಾನು ಬಂದೆ.

ರಾಜು— ಓ, ಪಿಶಿ ಮಾ.

ಮುದುಕಿ— ಸ್ವಲ್ಪ ದಿನ ಇಲ್ಲೇ ಇರೋಣ ಅಂತ ಬಂದೆ.

ರಾಜು— ಇರೋಣ ಅಂತ ಬಂದ್ಯಾ ?

ಮುದುಕಿ— ಹೌದಪ್ಪ ಸ್ವಲ್ಪ ದಿನ.

ರಾಜು— ಇರೋಣ ಅಂತಲಾ ?

ಮುದುಕಿ— ಕೆಲವೇ ದಿನವಪ್ಪಾ. ಮನೇಲಿ ಯಾವಾಗ ನೋಡಿದ್ರೂ ಕರಕರೆ.

ರಾಜು— ಆಯ್ತು, ಇರು.... ಏಯ್, ನಿನ್ನ ತಾಯಿಗೆ ಹೋಗಿ ಹೇಳು, ಪಿಶಿ ಮಾ ಬಂದಿದಾಳೆ ಅಂತ. ನೀರು ತಂದ್ಕೊಡು.

ಮುದುಕಿ— ಈ ಮುದಿ ವಯಸ್ಸಲ್ಲಿ ಮತ್ತೆಲ್ಲಿ ಹೋಗಲಿ ಹೇಳು, ಅದ ಕ್ಕಾಗಿ ನಿನ್ನ ಹತ್ರಾನೇ ಬಂದುಬಿಟ್ಟೆ.

ಕ್ಷೀಣನ

(೮)

ವರ್ಧನ

ದುರ್ಗಾಪೂಜೆ. ದೇವಿಯ ಪ್ರತಿಮೆಯ ಎದುರಿನಲ್ಲಿ ಒಬ್ಬ ಡ್ರಮ್ ಬಾರಿಸುತ್ತಿದ್ದಾನೆ.

ಅಪೂ ಮತ್ತು ದುರ್ಗಾ ಹೊಸ ಬಟ್ಟೆ ತೊಟ್ಟು ಮನೆಯಿಂದ ಹೊರಕ್ಕೆ ಓಡುತ್ತಿದ್ದಾರೆ. ಅವರನ್ನು ತಡೆಯಲೆತ್ನಿಸಿದ ಸರ್ವಜಯಾ, ಅದು ಸಾಧ್ಯವಾಗದೆ, ಅವರು ಓಡುವು ದನ್ನು ಕಂಡು ನಗುತ್ತಾಳೆ.

ಮಕ್ಕಳೆಲ್ಲ ಮುಖರ್ಜಿಯ ಅಂಗಳಕ್ಕೆ ಓಡುತ್ತಿದ್ದಾರೆ. ಅಲ್ಲಿ, ಶೇಜ್‌ಬೌ ಮಕ್ಕಳಿಗೆ ಸಿಹಿ ಹಂಚುತ್ತಿದ್ದಾಳೆ. ಅಪೂ ಮತ್ತು ದುರ್ಗಾ ಅಲ್ಲಿ ಬರುತ್ತಾರೆ. ಹಂಚುತ್ತಿರುವ ಸಿಹಿಯನ್ನು ಪಡೆದುಕೊಂಡು ಅಲ್ಲಿಂದ ಡ್ರಮ್ ಬಾರಿಸುವವನ ಕಡೆ ಓಡುತ್ತಾರೆ.

ಕ್ಷಯವರ್ಧನ

ರಾತ್ರಿ. ನಾಟಕ ನಡೆಯುತ್ತಿದೆ. ಹರಿಹರ, ಸರ್ವಜಯಾ, ದುರ್ಗಾ ಮತ್ತು ಅಪೂ ಪ್ರೇಕ್ಷಕರ ಗುಂಪಿನ ಮಧ್ಯೆ ನಾಟಕ ನೋಡುತ್ತ ಕೂತಿದ್ದಾರೆ.

ನಾಯಕ— ಎಚ್ಚರ, ಎಚ್ಚರ ! ಇನ್ನೊಂದು ಬಾರಿಗೆ ನೀನೇನಾದರೂ ಇಂಥ ಮಾತುಗಳನ್ನಾಡಿದ ಪಕ್ಷದಲ್ಲಿ ನಿನ್ನ ನಾಲಗೆಯನ್ನು ಕತ್ತರಿಸಿ ನಾಯಿಗೆ ಹಾಕಿಯೇನು !

ರಾಜ— ಈ ಜಗತ್ತಿನ ಕ್ಷೇಮಸಾಧನೆಗೋಸ್ಕರ ನಾನು ನಿನ್ನನ್ನು ನಾಶ ಮಾಡಿ ಹಾಕುತ್ತೇನೆ.

ನಾಯಕಿ— ತಂದೆಯೇ, ಅವನನ್ನು ಕ್ಷಮಿಸು. ನಿನ್ನ ಪ್ರತಿಜ್ಞೆಯನ್ನು ಹಿಂತೆಗೆದುಕೋ. ನಿನ್ನ ಸ್ವಹಸ್ತದಿಂದಲೇ ನಿನ್ನ ಈ ಮಗಳನ್ನು ವಿಧವೆಯಾಗಿ ಮಾಡಬೇಡ.

ರಾಜ— ಸರಿದು ನಿಲ್ಲು.

ನಾಯಕ— ಎಲೆ ಸುಜಾತ, ಹೀಗೆ ನೀನೇಕೆ ನಿನ್ನ ಆತ್ಮಗೌರವಕ್ಕೆ ಭಂಗ ತಂದುಕೊಳ್ಳುವೆ? ಈಗ ನೀನು ಈ ರಾಜ್ಯದ ರಾಜಕುಮಾರಿಯಲ್ಲ. ಒಬ್ಬ ಮನುಷ್ಯಶ್ರೇಷ್ಠನ ಪತ್ನಿಯಾಗಿದ್ದೀಯೆ. ನೀನೇಕೆ ಹೀಗೆ, ಈ ನನ್ನ ಕ್ಷುಲ್ಲಕವಾದ ಜೀವಕ್ಕೋಸ್ಕರವಾಗಿ, ದೀನಳಾಗಬೇಕು?

ನಾಯಕಿ— ತಂದೆಯೇ, ನನಗೆ ಬೇಕಾದ ಶಿಕ್ಷೆಯನ್ನೇ ವಿಧಿಸು. ಆದರೆ ನನ್ನ ಪತಿವರ್ಯನನ್ನು ಉಳಿಸು.

ರಾಜ— ಈ ರಾಜ, ಮನುಷ್ಯರ ಬಗ್ಗೆ ಕರುಣೆ ತೋರಿಸಲಾರ. ತೊಲಗು ಇಲ್ಲಿಂದ.

ನಾಯಕ— ಸುಜಾತ, ಏಳು, ಮೇಲಕ್ಕೇಳು. ಈ ನಿನ್ನ ಪತಿಯ ಪ್ರಾರ್ಥನೆಯನ್ನು ಮನ್ನಿಸು.

ನಾಯಕಿ— ಇಲ್ಲ ಇಲ್ಲ. ನನ್ನ ತಂದೆ, ಈ ನನ್ನ ದೇಹದ ಕಳೇವರವನ್ನು ತುಳಿದು ಮುಂದೆ ಹೋಗಬೇಕು.

ರಾಜ— ಎಲ್ಲರೂ ಹೋಗಿ, ತೊಲಗಿಹೋಗಿ.

ನಾಯಕಿ— ಸತ್ಯಕ್ಕೆ ಚ್ಯುತಿಯಿಲ್ಲವಾದರೆ ಈತನ ಅಭಿಮಾನ ಭಂಗವಾಗದೆ ಇರಲಾರದು.

ರಾಜ— ನಿನ್ನ ಅಹಂಕಾರವನ್ನು ನಾಶಗೊಳಿಸುತ್ತೇನೆ. ಎಲೈ ದೈತ್ಯಪುತ್ರನೇ, ನನ್ನ ಮಗಳೇ ನನ್ನ ಹಾದಿಯಲ್ಲಿ ಕಂಟಕಳಾಗಿದ್ದಾಳಲ್ಲವೆ? ಅವಳನ್ನೇ ಕೊಂದು ನನ್ನ ಸೇಡು ತೀರಿಸಿಕೊಳ್ಳುತ್ತೇನೆ.

ಮಹಾಕಾಳ— ನಾನು ನಿನ್ನನ್ನು ನಾಶಗೊಳಿಸುವೆನೆಂದು ಪ್ರತಿಜ್ಞೆ ಮಾಡಿದ್ದೆ, ನೆನಪಿದೆಯೆ? ಈಗ ಅದಕ್ಕೆ ಕಾಲ ಒದಗಿ ಬಂದಿದೆ.

ನಾಯಕಿ— ಇಲ್ಲ ಇಲ್ಲ. ಓ ನನ್ನ ಸಹೋದರ, ಓ ನನ್ನ ಹಿತೈಷಿಯೇ, ಬೇಡಿಕೊಳ್ಳುತ್ತೇನೆ, ನನ್ನ ಗಂಡನ ಜೀವವನ್ನುಳಿಸಿಕೊಡು.

ರಾಜ— ಆಕೆಯ ಮಾತಿಗೆ ಗಮನಕೊಡಬೇಡ. ಅವನನ್ನು ಕೊಂದು ಹಾಕು. ಆ ನೀಚ ಎಲ್ಲಿದ್ದಾನೆ? ನನ್ನ ಮಗಳನ್ನು ತಡೆದು ನಿಲ್ಲಿಸು ತ್ತೇನೆ.

ಮಹಾಕಾಳ— ಎಲ್ಲಿದ್ದಾನೆ ಆ ಖೂಳ?

ಸುಜಾತಾ— ತಂದೆಯೇ ನನ್ನನ್ನು ಬಿಟ್ಟುಬಿಡು.

ರಾಜ— ಈ ದಿನಕ್ಕೆ ನನ್ನ ಸೇಡಿನ ಬುಭುಕ್ಷೆ ತೀರುವಂತಿದೆ.

ನಾಯಕಿ— (ಗಂಡನಿಗೆ ಕತ್ತಿ ಕೊಟ್ಟು) ಪತಿದೇವಾ, ಈ ಖಡ್ಗವನ್ನು ತೆಗೆದುಕೋ. ಇದರಿಂದ ನಿನ್ನನ್ನು ರಕ್ಷಿಸಿಕೋ.

ನಾಯಕ— ನೋಡು ನೋಡು, ಎಲೈ ರಕ್ಕಸನೇ, ಸತ್ಯಕ್ಕೆ ವಿಜಯ ವಾಗುವುದನ್ನು ಕಾಣುವೆ.

ಇಬ್ಬರೂ ಕತ್ತಿ ಹಿಡಿದು ಯುದ್ಧ ತೊಡಗುತ್ತಾರೆ.

ರಾಜ— ಯಾರಲ್ಲಿ? ನನ್ನ ಮಣಿಕವಚವನ್ನು ತಂದು ತೊಡಿಸಿ. ಪಟ್ಟದ ಕತ್ತಿಯನ್ನು ತನ್ನಿ.

ಒಬ್ಬ ಹೆಂಗಸು ಕತ್ತಿಯನ್ನು ಕೊಂಡು ರಂಗದಮೇಲೆ ಧಾವಿಸಿ ಬರುತ್ತಾಳೆ.

ಹೆಂಗಸು— ಇಗೋ ಕತ್ತಿ. ಇಬ್ಬರೂ ಕೂಡಿ ಒಟ್ಟಿಗೇ ಆತನಮೇಲೆರಗಿ ಸೋಲಿಸಿ..

ಇನ್ನೊಬ್ಬ ಹೆಂಗಸು ಮತ್ತೊಂದು ಕತ್ತಿಯನ್ನು ಕೊಂಡು ನಾಯಕಿಯ ಬಳಿಗೆ ಬರು ತ್ತಾಳೆ.

ಹೆಂಗಸು— ರಾಜಕುಮಾರಿ, ಈ ಕತ್ತಿಯನ್ನು ಒಪ್ಪಿಸಿಕೋ. ಇದ ರಿಂದ ನಿನ್ನ ಪತಿಯನ್ನು ರಕ್ಷಣೆಮಾಡಿಕೊಳ್ಳು.

ಸುಜಾತ ತಂದೆಯೊಡನೆ ಕತ್ತಿಯುದ್ಧದಲ್ಲಿ ತೊಡಗುತ್ತಾಳೆ. ಅಲ್ಲಿ ಮಹಾಕಾಲ ಮತ್ತು ನಾಯಕ ಹೋರಾಡುತ್ತಿದ್ದಾರೆ.

ಮನೆಯಲ್ಲಿ ಅಪೂ ಕನ್ನಡಿಯಲ್ಲಿ ನೋಡಿಕೊಳ್ಳುತ್ತ ಕಾಗದದಲ್ಲಿ ಕತ್ತರಿಸಿರುವ ಮೀಸೆಯನ್ನು ಅಂಟಿಸಿಕೊಳ್ಳುತ್ತಿದ್ದಾನೆ. ಕನ್ನಡಿಯ ಬಿಂಬ ಮಾತ್ರ ನಮಗೆ ಕಾಣಿಸುತ್ತಿದೆ. ಸರ್ವಜಯಾ ಒಗೆದ ಬಟ್ಟೆಗಳನ್ನು ಹಿಡಿದು ಚಾವಡಿಯಲ್ಲಿ ಬರುತ್ತಾಳೆ.

ಸರ್ವಜಯಾ— ದುರ್ಗಾ, ಹೋಗು, ಕರು ಎಲ್ಲಿದೆ ನೋಡ್ಕೊಂಡು ಬಾ.

ಅಪೂ ಕೈಯಲ್ಲಿ ಕಾಗದದ ಕಿರೀಟವೊಂದನ್ನು ಹಿಡಿದು ತಾಯಿಯ ಬಳಿ ಬರುತ್ತಾನೆ.

ಅಪೂ— ಅಮ್ಮಾ, ಈ ಕಿರೀಟ ಕಟ್ಟಿಕೊಡು.

ಸರ್ವಜಯಾ— ಸ್ವಲ್ಪ ಇರು. ನಿಮಗೆಲ್ಲಾ ಹೀಗೇ ಸೇವೆ ಮಾಡ್ಕೊಂತಾನೇ ಇದ್ದುಬಿಡಲಾ ?

ಹೊರಗೆ ದುರ್ಗಾ ಕಾಣಿಸಿಕೊಳ್ಳುತ್ತಾಳೆ.

ದುರ್ಗಾ— ಅಪೂ. ಪಿಶಿಅಜ್ಜಿ ನೋಡೋಕೆ ಹೋಗ್ತೀನೆ, ಬರ್‍ತೀಯ?

ಸರ್ವಜಯಾ—ಎಲ್ಲೂ ಬೇಡ. ಈಗ ಹೋಗಿ ಕರು ನೋಡ್ಕೊಂಡು ಬಾ.

ದುರ್ಗಾ ಹೊರಬಾಗಿಲಲ್ಲಿ ನಿಂತು ಮುಗುಳು ನಗುತ್ತಿದ್ದಾಳೆ. ಅಪೂನ ಕಿರೀಟ ಕಂಡ ಕೂಡಲೇ ಕ್ರುದ್ಧಳಾಗುತ್ತಾಳೆ,

ದುರ್ಗಾ— ಹೇ, ಆ ಜರಿ ಎಲ್ಲಿ ಸಿಕ್ಕಿತು ?

ದುರ್ಗಾ ಅಪೂನ ಕಡೆ ಓಡುತ್ತಾಳೆ. ಅಪೂ ತಪ್ಪಿಸಿಕೊಳ್ಳುತ್ತಾನೆ. ಆಕೆ ಮುಂದಕ್ಕೆ ಧಾವಿಸಿ ಮಲಗುವ ಕೋಣೆಗೆ ಓಡುತ್ತಾಳೆ. ಅಲ್ಲಿ ಬಾಗಿಲು ಹೊಕ್ಕಾಗ ತನ್ನ ಆಟದ ಪೆಟ್ಟಿಗೆ ನೆಲಕ್ಕೆ ಬಿದ್ದಿದ್ದು ಅದರೊಳಗಿನ ವಸ್ತುಗಳು ನೆಲದಮೇಲೆ ಚೆಲ್ಲಾಪಿಲ್ಲಿ ಹರಡಿರುವುದನ್ನು ಕಾಣುತ್ತಾಳೆ. ತಿರುಗಿ ಬಂದು ಅಪೂನನ್ನು ಅಟ್ಟಿಸಿ ಹೋಗುತ್ತಾಳೆ. ಅಪೂ ಪಾಗಾರದ ಬಾಗಿಲಲ್ಲಿ ಹೊರಟು ಮತ್ತೆ, ಪಾಗಾರದ ಸೀಳು ಕಂಡಿಯೊಂದರಲ್ಲಿ ಒಳಕ್ಕೆ ಬರುತ್ತ, ತಪ್ಪಿಸಿ ಆಡುತ್ತ ನಗುತ್ತಾನೆ, ಓಡುತ್ತಾನೆ. ಕಡೆಗೂ ದುರ್ಗಾ ಆತನನ್ನು ಹಿಡಿದುಕೊಳ್ಳುತ್ತಾಳೆ. ಹೊಡೆಯತೊಡಗುತ್ತಾಳೆ. ಅಪೂ ಅಳುವುದನ್ನು ಕೇಳಿ ಸರ್ವಜಯಾ ಒಳಗಿಂದ ಧಾವಿಸಿ ಬರುತ್ತಾಳೆ.

ಸರ್ವಜಯಾ— ದುರ್ಗಾ, ಮತ್ತೆ ಅವನನ್ನು ಹೊಡೆದೆಯಾ ?

ದುರ್ಗಾ— ಅವನು ಯಾಕೆ ನನ್ನ ಆಟದ ಪೆಟ್ಟಿಗೆ ಮುಟ್ಟಬೇಕು ?

ಸರ್ವಜಯಾ— (ಇಬ್ಬರನ್ನು ಬಿಡಿಸುತ್ತ) ಅವನಿಗೆ ಬೇಕಾಗಿತ್ತು,

ತಗೊಂಡ. ಅವನ್ನೆಲ್ಲಾ ಕೂಡಿಟ್ಟುಕೊಂಡು ನೀನಾದ್ರೂ ಏನು ಮಾಡ್ತೀಯಾ ?

ದುರ್ಗಾ— ನನ್ನ ಜರಿ ಅಷ್ಟನ್ನೂ ತಗೊಂಡಿದಾನೆ.

ಸರ್ವಜಯಾ— ಸಾಕು ನಡಿ. ಕರು ಹುಡುಕ್ಕೊಂಡು ಬಾ. (ಮನೆಯೊಳಕ್ಕೆ ಹೋಗುತ್ತಾಳೆ.)

ದುರ್ಗಾ— (ಅಪೂಗೆ) ದೊಡ್ಡ ರಾಜಕುಮಾರ !

ದುರ್ಗಾ ಅಪೂನನ್ನು ದುರುಗುಟ್ಟಿ ನೋಡುತ್ತಾಳೆ. ಅವನನ್ನು ಅಣಕಿಸಿ ಕೆಳಗೆ ಕಾಲುದಾರಿಯ ಕಡೆಗೆ ಓಡುತ್ತಾಳೆ. ಅಪೂ ನಿಧಾನವಾಗಿ ಆಕೆಯನ್ನು ಹಿಂಬಾಲಿಸುತ್ತಾನೆ.

**ಕ್ಷಯವರ್ಧನ**

ಮುದುಕಿ, ತನ್ನ ಗಂಟು ಗದಡಿ ಹೊತ್ತುಕೊಂಡು ಮನೆಗೆ ಮರಳಿ ಬರುತ್ತಿದ್ದಾಳೆ. ಸರ್ವಜಯಾ, ಅಡಿಗೆ ಮನೆಯಲ್ಲಿ ಏನನ್ನೋ ತಿನ್ನುತ್ತ ಕೂತಿದ್ದಾಳೆ.

ಮುದುಕಿ— ಬಾವೂ, ಎಲ್ಲಿದೀಯಾ ?

ಸರ್ವಜಯಾ— ಮತ್ಯಾಕೆ ಬಂದ್ರಿ ?

ಮುದುಕಿ— ಯಾಕೋ ಹುಷಾರಿಲ್ಲ. ಕಡೆಗಾಲದಲ್ಲಿ, ಇರೋ ನಾಲ್ಕು ದಿನ ಈ ನಮ್ಮ ಹಳೇ ಮನೇಲೇ ಕಳೆಯೋಣಾಂತ....

ಸರ್ವಜಯಾ— ಅದೆಲ್ಲಾ ನೆಪ ಬೇಡ.... ಏನೋ ಈ ಹಳೇ ಮನೇಗೆ ಒಳ್ಳೇದಾಗಲೀ ಅಂತ ತಪಸ್ಸು ಮಾಡೋರ ಹಾಗೆ.... ಇಲ್ಲಿಂದ ನಡೆದ್ಬಿಡಿ.... ನಾ ಸುಮ್ನೆ ಇರೋಲ್ಲ ಅಷ್ಟೆ....

ಮುದುಕಿ— ಅಲ್ಲ, ಸ್ವಲ್ಪ ನಿಲ್ಲು....

ಮುದುಕಿ ತನ್ನ ಚಾವಡಿಗೆ ಹೋಗಿ ತನ್ನ ಗಂಟುಗಳನ್ನು ಇಳಿಸಿಟ್ಟು ಕೂರುತ್ತಾಳೆ.

ಸರ್ವಜಯಾ— ಮತ್ಯಾಕೆ ಕೂತಿದ್ದು ?

ಮುದುಕಿ— ಸ್ವಲ್ಪ ಸಂಪ್ರಾಣಿಸಿಕೋತೇನೆ.

ಇದೇ ಹೊತ್ತಿನಲ್ಲಿ—ಹೊಲದಲ್ಲಿ, ದುರ್ಗಾ ಕಬ್ಬಿನ ತುಂಡನ್ನು ಕಚ್ಚಿ ತಿನ್ನುತ್ತ ನಡೆ

ಯುತ್ತಿದ್ದಾಳೆ. ಅಪ್ಪೂ, ಕೊಂಚ ದೂರವಾಗಿದ್ದುಕೊಂಡು ಆಕೆಯನ್ನು ಅನುಸರಿಸು ತ್ತಿದ್ದಾನೆ.

ಮನೆ—

ಸರ್ವಜಯಾ— ಏನು ನಿದ್ರೆ ಮಾಡ್ತಿದ್ದಾ ?

ಮುದುಕಿ— ಸ್ವಲ್ಪ ನೀರು ಕೊಡ್ತೀಯಾ ?

ಸರ್ವಜಯಾ— ತಗೊಳ್ಳಿ ಬೇಕಾದರೆ.

ಮುದುಕಿ ನೀರಿನ ಮಡಕೆ ಹತ್ತಿರ ಹೋಗುತ್ತಾಳೆ. ಸರ್ವಜಯಾ ಮುಚ್ಚಳ ತೆಗೆದು ಸುಮ್ಮನೆ ಕೂರುತ್ತಾಳೆ. ಮುದುಕಿ ಸರ್ವಜಯಾಳ ಬದಿಯಲ್ಲಿ ಕೂತು ಆಕೆಯ ಕಣ್ಣಲ್ಲಿ ಕಣ್ಣಿಟ್ಟು ನೋಡಿ ದುರ್ಬಲವಾಗಿ ಮುಗುಳ್ನಗುತ್ತಾಳೆ. ಸರ್ವಜಯಾಳಿಂದ ಪ್ರತಿಕ್ರಿಯೆ ಬಾರದೆ ಹೋಗಲು, ತಟ್ಟನೆ ಎದ್ದು, ನೀರನ್ನು ಹಾಗೇ ಹೊರಕ್ಕೆ ಸುರಿದು ಅದರಲ್ಲಿ ಕೊಂಚ ತಲೆಗೆ ತಟ್ಟಿಕೊಂಡು ಹೊರಡುತ್ತಾಳೆ. ಪಾತ್ರೆಯಲ್ಲಿ ಮತ್ತೂ ಉಳಿದಿರುವ ಕೊಂಚ ನೀರನ್ನು ಅಲ್ಲಿರುವ ನಿಂಬೆಗಿಡಕ್ಕೆ ಸುರಿಯುತ್ತಾಳೆ. ಅಲ್ಲಿಂದ ಗಂಟು ಮೂಟೆಗಳನ್ನೆತ್ತಿಕೊಂಡು ಹೊರಬಾಗಿಲ ಕಡೆ ನಡೆಯುತ್ತಾಳೆ. ಸರ್ವಜಯಾ ಆ ಕಡೆ ಲಕ್ಷ್ಯವಿಲ್ಲದೆ ತನ್ನಷ್ಟಕ್ಕೆ ತಿನ್ನುತ್ತ ಕೂತಿದ್ದಾಳೆ.

**ಕ್ಷಯವರ್ಧನ**

ಹೊಲದಲ್ಲಿ— ದುರ್ಗಾ ಟೆಲಿಗ್ರಾಫ್ ಕಂಬವೊಂದನ್ನು ನೋಡುತ್ತ ನಿಂತಿದ್ದಾಳೆ. ಹತ್ತಿರಹೋಗಿ ಕಂಬಕ್ಕೆ ಕಿವಿ ಹಚ್ಚುತ್ತಾಳೆ. ಅಪ್ಪೂ ಹೊಲದಲ್ಲಿ ಹಾದು ದುರ್ಗಾಳ ಕಡೆ ಬರುತ್ತಿದ್ದಾನೆ. ದುರ್ಗಾ ಅಲ್ಲಿಂದ ಹೊರಡುತ್ತಾಳೆ. ಅಪ್ಪೂ, ತಾನೂ ಕಂಬಕ್ಕೆ ಕಿವಿಹಚ್ಚಿ ತಂತಿಗಳ ಝೇಂಕಾರ ಕೇಳುತ್ತಾನೆ. ಅನಂತರ, ದುರ್ಗಾಳನ್ನು ಹಿಂಬಾಲಿಸಿ ನಡೆಯುತ್ತಾನೆ.

**ಕ್ಷಯವರ್ಧನೆ**

ದುರ್ಗಾ ಹೊಲದಲ್ಲಿ ಓಡುತ್ತಿದ್ದಾಳೆ. ಅಪ್ಪೂ ಹೊಲದ ನಡುವೆ ಕಾಶ್ ಹುಲ್ಲಿನ ನಡುವೆ ಕಾಣಿಸಿಕೊಳ್ಳುತ್ತಾನೆ. ಸುತ್ತಲೂ ನೋಡುತ್ತಾನೆ. ಯಾರೂ ಕಾಣದಿರಲು ದುರ್ಗಾ

ಳನ್ನು ಕೂಗುತ್ತಾನೆ. ದುರ್ಗಾ ಎಸೆದ ಒಂದು ಕಬ್ಬಿನ ತುಂಡು ಹಾರಿಬರಲು ಅದನ್ನು ಹಿಡಿದುಕೊಂಡು ನೋಡುತ್ತಾನೆ. ಅಲ್ಲೇ ದುರ್ಗಾ ಕಬ್ಬು ತಿನ್ನುತ್ತ ಕೂತಿರುವುದು ಕಾಣಿಸುತ್ತದೆ. ಕಬ್ಬಿನ ತುಂಡನ್ನು ಕಚ್ಚಿಕೊಂಡು ಅಪೂ ಆಕೆಯ ಹತ್ತಿರ ಹೋಗುತ್ತಾನೆ.

> ದುರ್ಗಾ— ಕೂತುಕೋ. (ಅಪೂ ಕುಳಿತುಕೊಳ್ಳುತ್ತಾನೆ) ತಿನ್ನು.
>
> ಅಪೂ— (ತಿನ್ನುತ್ತಾ, ದುರ್ಗಾಳನ್ನು ನೋಡಿ) ನಾವು ಎಲ್ಲಿಗೆ ಬಂದಿರೋದು ? ಅವೆಲ್ಲ ಏನು ?

ದುರ್ಗಾಳ ಪ್ರತಿಕ್ರಿಯೆ ಇಲ್ಲದ್ದಕ್ಕಾಗಿ ಅಪೂ ಸುಮ್ಮನಾಗುತ್ತಾನೆ. ತಟ್ಟನೆ ಆಕೆ ಕೈ ಎತ್ತಿ, ಸುತ್ತಲೂ ನೋಡುತ್ತಾಳೆ. ಧ್ವನಿ ಅಡಗಿಸಿ "ರೈಲು!" ಎಂದು ಆಶ್ಚರ್ಯದಿಂದ ಉದ್ಗರಿಸುತ್ತಾಳೆ. ಇಬ್ಬರೂ ಮೇಲಕ್ಕೆದ್ದು ಸುತ್ತ ನೋಡುತ್ತಾರೆ. ಹಿನ್ನೆಲೆಯಲ್ಲಿ ಚಲಿಸುತ್ತಿರುವ ರೈಲಿನ ಹೊಗೆ ಕಾಣಿಸುತ್ತದೆ. ಇಬ್ಬರೂ ಆ ಕಡೆ, ಹೊಲದಲ್ಲಿ ಓಡತೊಡಗುತ್ತಾರೆ. ದುರ್ಗಾ ಜಾರಿ ಬೀಳುತ್ತಾಳೆ. ಅಪೂ ಸಾಧ್ಯವಾದಷ್ಟೂ ವೇಗವಾಗಿ ಓಡುತ್ತಾನೆ ಕಡೆಯಲ್ಲಿ ಆತ, ರೈಲುದಾರಿಯ ಏರಿಯ ಸಮೀಪಕ್ಕೆ ಹೋಗುವಾಗ, ರೈಲಿನ ಕಡೆಯ ಗಾಡಿ ಗುಡುಗಿ ಅಬ್ಬರಿಸಿ ಧಾವಿಸಿ ಹೋಗುವುದು ಕಾಣಿಸುತ್ತದೆ..... ಇಬ್ಬರು ಮಕ್ಕಳೂ ಧಾವಿಸಿ ನಡೆದ ರೈಲು ಮತ್ತು ಆದರ ಹೊಗೆಯನ್ನು ನೋಡುತ್ತ ನಿಲ್ಲುತ್ತಾರೆ.

ಕ್ಷಯಸಂವರ್ಧನ

ಅಪೂ ಮತ್ತು ದುರ್ಗಾ ಮರಗಳ ಬದಿಯ ಕಾಲುದಾರಿಯಲ್ಲಿ ಕರುವಿನೊಡನೆ ಆಟವಾಡುತ್ತ ಮನೆಗೆ ಹಿಂತಿರುಗುತ್ತಿದ್ದಾರೆ. ಅಲ್ಲೇ ಒಂದು ದಿಬ್ಬದ ಬಳಿ ಮುದುಕಿ ಏದುಸಿರುಬಿಡುತ್ತ ಕೂತಿದ್ದಾಳೆ. ಅದನ್ನು ಕಂಡ ದುರ್ಗಾ, ಅಪೂಗೆ ಸದ್ದು ಮಾಡದಿರಲು ಸಂಜ್ಞೆ ಮಾಡಿ, ಕಳ್ಳಹೆಜ್ಜೆಯಲ್ಲಿ ಮುದುಕಿಯನ್ನು ಸಮೀಪಿಸುತ್ತಾಳೆ. ಆವಳನ್ನು ಒಮ್ಮೆ ಸುತ್ತಿಬಂದು ಅವಳಿಂದ ಪ್ರತಿಕ್ರಿಯೆ ಇಲ್ಲದ್ದನ್ನು ಕಂಡು, ಮೆಲ್ಲಗೆ ಆಕೆಯನ್ನು ಮುಟ್ಟಿ 'ಅಜ್ಜೀ' ಎನ್ನುತ್ತ ಅಲುಗಿಸುತ್ತಾಳೆ. ಮುದುಕಿಯ ದೇಹ ಅನಾಮತ್ತಾಗಿ ಉರುಳುತ್ತದೆ ಆಕೆ ಸತ್ತಳೆಂದು ಮಕ್ಕಳಿಗೆ ಅರಿವಾಗತೊಡಗುತ್ತದೆ. ಇಬ್ಬರೂ ಮನೆಯ ಕಡೆ ಓಡುತ್ತಾರೆ, ದಾರಿಯಲ್ಲಿ ಮುದುಕಿಯ ನೀರಿನ ಪಾತ್ರೆಯನ್ನು ಕಂಡು ಅದನ್ನು ದುರ್ಗಾ ಒದೆಯುತ್ತಾಳೆ. ಪಾತ್ರೆ ಸದ್ದುಮಾಡುತ್ತ ಉರುಳುರುಳಿ ಕೆಳಗಿರುವ ನೀರಿನ ಹೊಂಡದಲ್ಲಿ ಹೋಗಿ ಬೀಳುತ್ತದೆ.

ಕಾಲುದಾರಿಯಲ್ಲಿ, ಹರಿಹರ ಮತ್ತು ಊರಿನ ಹಲವರು ಮುದುಕಿಯ ಶವವನ್ನು ಸ್ಮಶಾನಕ್ಕೆ ಹೊತ್ತು ಒಯ್ಯುತ್ತಿದ್ದಾರೆ. ಅಪೂ ಮತ್ತು ದುರ್ಗಾ ಮುದುಕಿಯು ಚಾವಡಿಯ ಮೇಲೆ ಸದ್ದಿಲ್ಲದೆ ಕೂತಿದ್ದಾರೆ.

ಹರಿಹರ ಕೊಳದಲ್ಲಿ ಸ್ನಾನ ಮುಗಿಸಿ ಒದ್ದೆ ಬಟ್ಟೆಯಲ್ಲಿ ಮೇಲಕ್ಕೆ ಹತ್ತಿ ಬರುತ್ತಿದ್ದಾನೆ. ಹಿನ್ನೆಲೆಯಲ್ಲಿ ಸರ್ವಜಯಾ ಸ್ತಬ್ಧವಾಗಿ ನಿಂತಿದ್ದಾಳೆ.

ಕ್ಷೀಣನ

(೯)

ವರ್ಧನ

ಬಯಾಸ್ಕೋಪ್ ಪ್ರದರ್ಶನ ನಡೆಸಿರುವ ಒಬ್ಬನ ಸುತ್ತ ಮಕ್ಕಳೆಲ್ಲ ಗುಂಪುಗೂಡಿಕೊಂಡಿದ್ದಾರೆ.

ಬಯಾಸ್ಕೋಪ್‌ನವ—ಬನ್ನಿ, ಬನ್ನಿ. ನೋಡಿ ಬನ್ನಿ. ಡಿಲ್ಲಿ ನೋಡಿ, ಕುತುಬ್ ನೋಡಿ. ಆಗ್ರಾ ನೋಡಿ, ತಾಜ್ ನೋಡಿ. ಮದ್ರಾಸ್ ದೇವಸ್ಥಾನ ನೋಡಿ. ಬೊಂಬಾಯಿ ಬಂದರು ನೋಡಿ..........ನೋಡಿ ಬನ್ನಿ. ಬನ್ನಿ ನೋಡಿ.

ಅಪೂ ಮತ್ತು ದುರ್ಗಾ ಕೊಂಚ ದೂರದಲ್ಲಿ ನೋಡುತ್ತ ನಿಂತಿದ್ದಾರೆ.

ಮನೆಯಲ್ಲಿ—ಹರಿಹರ ಹೊರಡುವ ತಯಾರಿ ನಡೆಸಿದ್ದಾನೆ. ಸರ್ವಜಯಾ ಆತನಿಗೆ ನೆರವಾಗುತ್ತಿದ್ದಾಳೆ.

ಸರ್ವಜಯಾ—ಯಾವಾಗ ಹಿಂದಕ್ಕೆ ಬರೋದು ಗೊತ್ತಾ ?

ಹರಿಹರ—ಸುಮಾರಾಗಿ, ಹೆಚ್ಚು ಅಂದ್ರೆ ಒಂದು ವಾರ ಅಷ್ಟೆ. ಆದರೆ, ಅಲ್ಲಿಂದ ದಿಷ್ಟುಪುಗೆ ಹೋಗಬೇಕು ಅಂತ ಯೋಚನೆ ಇದೆ. ಅದು ಒಂದು ಪಟ್ಟಣ.

ಹರಿಹರ ಮಲಗುವ ಕೋಣೆಗೆ ಹೋಗುತ್ತಾನೆ. ತನ್ನ ಕೊಡೆ ಎತ್ತಿಕೊಂಡು ಅಲ್ಲಿರುವ ಗಣಪತಿಯ ಪ್ರತಿಮೆಗೆ ಬಾಗಿ ನಮಸ್ಕರಿಸಿ ಹೊರ ಚಾವಡಿಗೆ ಬರುತ್ತಾನೆ. ತನ್ನ ಸಾಮಾನುಗಳನ್ನು ಎತ್ತಿಕೊಳ್ಳುತ್ತಾನೆ.

ಹರಿಹರ—ಹೋಗಿ ಬರ್ತೀನೆ.

ಸರ್ವಜಯಾ—ಹೋಗಿಬನ್ನಿ.

ಆತ ಹೊರಡುತ್ತಿರುವಂತೆ ಸರ್ವಜಯಾ ತನ್ನಲ್ಲೇಬಾಗಿ ಪ್ರಾರ್ಥಿಸಿಕೊಳ್ಳತೊಡಗುತ್ತಾಳೆ

ಹರಿಹರ, ಊರ ದಾರಿಯಲ್ಲಿರುವ ದೇವಸ್ಥಾನದ ಎದುರು ನಿಂತು ಬಾಗಿ ಕೈಮುಗಿದು ಹೊರಡುತ್ತಾನೆ. ದೂರದಿಂದ ನೋಡುತ್ತಿರುವ ದುರ್ಗಾ ಜೊತೆಯಲ್ಲಿರುವ ಅಪೂಗೆ ಚುಚ್ಚುತ್ತಾಳೆ.

ದುರ್ಗಾ—ಬೇಗ ಹೋಗಿ ಅಪ್ಪನ ಹತ್ತಿರ ಎರಡು ಪೈಸೆ ಕೇಳು.

ಅಪೂ ಓಡುತ್ತಾನೆ. ಅಪೂ ಹತ್ತಿರ ಬಂದಾಗ ಹರಿಹರ ಬಾಗುತ್ತಾನೆ. ಅಪೂ ಆತನ ಕಿವಿಯಲ್ಲಿ ಏನೋ ಹೇಳಲು ಹರಿಹರ ತನ್ನ ಜೇಬಿಗೆ ಕೈಹಾಕುತ್ತಾನೆ. ಇದನ್ನು ನೋಡುತ್ತಿರುವ ದುರ್ಗಾ ಮೆಲುನಕ್ಕು ಆ ಕಡೆ ಹೊರಡುತ್ತಾಳೆ; ಮರಳಿ ಬರುತ್ತಿರುವ ಅಪೂನನ್ನು ಕೂಡಿಕೊಳ್ಳುತ್ತಾಳೆ. ಇಬ್ಬರೂ ಬಯಾಸ್ಕೋಪ್ ತೋರಿಸುವಲ್ಲಿ ಹೋಗಿ ಹಣ ಕೊಟ್ಟು ಅದರಲ್ಲಿ ಇಣುಕಿ ನೋಡತೊಡಗುತ್ತಾರೆ. ದೂರದಲ್ಲಿ ಹೋಗುತ್ತಿರುವ ಹರಿಹರ ಒಮ್ಮೆ ಮಕ್ಕಳ ಕಡೆ ನೋಡಿ ಮೆಲುನಗುತ್ತಾನೆ.

ಬಯಾಸ್ಕೋಪ್‌ನವ—ನೋಡಿ ನೋಡಿ. ಕಲ್ಕತ್ತೆ ಕಾಳೀಘಾಟ್....

### ಕ್ಷಯುವರ್ಧನ

ಸರ್ವಜಯಾ ಅಂಗಳದಲ್ಲಿ ಕೂತು ಹಪ್ಪಳ ಒಣಗಿಸುತ್ತಿದ್ದಾಳೆ. ದುರ್ಗಾ ಕೈಯಲ್ಲಿ ಒಂದು ಬೆಕ್ಕನ್ನೆತ್ತಿಕೊಂಡು ಬರುತ್ತಾಳೆ,

ಸರ್ವಜಯಾ—ದುರ್ಗಾ, ಇಲ್ಲಿ ಬಾ.

ದುರ್ಗಾ—ಮಾಡಿಕೊಡಬೇಕಾ ?

ಸರ್ವಜಯಾ—ಆ ಬೆಕ್ಕನ್ನ ಅಲ್ಲಿ ಬಿಟ್ಟು ಏನಾದ್ರೂ ಕೆಲಸಮಾಡು ಬಾ. ಹೋಗಿ ಎಂಡು ಪೈಸೆಗೆ ಸ್ವಲ್ಪ ಬೆಲ್ಲ ತಗೊಂಡು ಬಾ. ಅಪೂಗೆ ಸ್ವಲ್ಪ ಪಾಯಸ ಮಾಡ್ತೀನೆ.

ದುರ್ಗಾ—ಈಗ್ಲೇ ಹೋಗಬೇಕಾ ?

ಸರ್ವಜಯಾ—ಹೌದು, ಹೋಗು. ಅವನು ಬಹಳ ದಿನದಿಂದ ಹೇಳ್ತಿದ್ದಾನೆ.

ಕ್ಷೀಣನ

## ಭಾಗ : ಎರಡು

(೧)

ವರ್ಧನ

ಅಪೂ ಒಂದು ಕಾಗದ ಹಿಡಿದು ಮನೆಯ ಅಂಗಳದೊಳಕ್ಕೆ ಓಡಿಬರುತ್ತಾನೆ.

ಅಪೂ—ಕಾಗದ....ಕಾಗದ....ಕಾಗದ....ಕಾಗದ....

ಸರ್ವಜಯಾ—ಯಾರ ಕಾಗದ ನೋಡೋಣ, ನೋಡ್ತೇನೆ ಕೊಡು.

ಅಪೂ ಕಾಗದ ಕೈಯಲ್ಲಿ ಎತ್ತಿ ಹಿಡಿದು ಅಂಗಳದಲ್ಲಿ ಓಡೋಡಿ ಸುತ್ತುತ್ತಿದ್ದಾನೆ. ಸರ್ವಜಯಾ ಮೇಲಕ್ಕೇಳುತ್ತಾಳೆ. ಅಪೂ ಕಾಗದವನ್ನು ಎಸೆದು ಓಡಿಹೋಗುತ್ತಾನೆ. ಸರ್ವಜಯಾ ಕಾಗದವನ್ನೆತ್ತಿಕೊಂಡು ಓದತೊಡಗುತ್ತಾಳೆ.

ಹರಿಹರನ ದನಿ—ಕಳೆದ ರಾತ್ರಿ ದೇಶಘರ ತಲುಪಿರುತ್ತೇನೆ. ಶ್ರೀಮಾನ್ ಮಹೇಶ ಬಿಷ್ವಾಶರನ್ನು ಭೇಟಿ ಮಾಡಿದ್ದಾಗಿದೆ. ಆದರೆ, ನಮ್ಮ ದುರ ದೃಷ್ಟದಿಂದ, ಅವರ ಇಬ್ಬರ ಮಕ್ಕಳು ವಿಧಿವಶರಾಗಿದ್ದು ಆ ಪ್ರಯುಕ್ತ ನಾನು ಅವರಲ್ಲಿ ಯಾವುದೇ ಸಂಗತಿಯನ್ನು ಪ್ರಸ್ತಾಪಿಸಲಿಕ್ಕೆ ಅನು ಕೂಲ ಸಿಗಲಿಲ್ಲವಾಯಿತು. ಈ ಪ್ರಯುಕ್ತ ನೀನು ಯೋಚನೆ ಮಾಡ ತಕ್ಕದ್ದಲ್ಲ. ನಾನು ಹೇಗಾದರೂ ಮನೆ ರಿಪೇರಿ ಬಗ್ಗಾಗಿ ಹಣವನ್ನು ಒಟ್ಟುಮಾಡಿಕೊಂಡು ಬೇಗನೇ ವಾಪಸ್ಸಾಗುತ್ತೇನೆ. ಕಡೆಯಲ್ಲಿ ಸಮ ಸ್ತವೂ ಮಂಗಳವೇ ಆಗುತ್ತದೆಂತ ಭಾವಿಸುವುದು. ಅಪೂ ಮತ್ತು ದುರ್ಗಾರಿಗೆ ಆಶೀರ್ವಚನಗಳು.

ಸರ್ವಜಯಾ ಅಲ್ಲೇ ಮೆಟ್ಟಿಲಮೇಲೆ ಯೋಚಿಸುತ್ತ ಕೂರುತ್ತಾಳೆ. ಬಾಗಿಲಲ್ಲಿ ಬಂದು ನಿಂತಿರುವ ಭಿಕ್ಷುಕನೊಬ್ಬನನ್ನು ಆಕೆ ಗಮನಿಸುವುದಿಲ್ಲ.

ಭಿಕ್ಷುಕ—ಅಮ್ಮಾ, ಭಿಕ್ಷಾ ನೀಡಿ ಪುಣ್ಯ ಕಟ್ಟಿಕೊಳ್ಳಿ ತಾಯೀ.

ದುರ್ಗಾ ಒಳಗಿಂದ ಭಿಕ್ಷೆ ತಂದು ಆತನ ಪಾತ್ರೆಗೆ ಸುರಿಯುತ್ತಾಳೆ.

ಭಿಕ್ಷುಕ—ರಾಣಿಯಾಗು ತಾಯೀ, ಮಹಾರಾಣಿ ಆಗು.

ಕ್ಷಯುವರ್ಧನ

ರಾತ್ರಿ. ಮಲಗುವ ಕೋಣೆಯಲ್ಲಿ ಸರ್ವಜಯಾ ಸೂಜಿದಾರ ಹಿಡಿದು ಚಿಂತಿಸುತ್ತ ಕೂತಿದ್ದಾಳೆ. ದುರ್ಗಾ ಮತ್ತು ಅಪೂ ಗಾಢ ನಿದ್ದೆಯಲ್ಲಿದ್ದಾರೆ. ಸರ್ವಜಯಾ ಏನೋ ನಿಶ್ಚಯ ಮಾಡಿದಂತೆ ಮೇಲಕ್ಕೆದ್ದು ಮಕ್ಕಳ ಬಳಿ ಹೋಗಿ ಅವರಿಗೆ ಹೊದಿಕೆ ಹೊದಿಸಿ ಅಪೂನ ಹಣೆಗೆ ಮುತ್ತಿಡುತ್ತಾಳೆ. ದುರ್ಗಾಳ ಹಣೆಗೆ ಕೈಯಿಟ್ಟು ಪರೀಕ್ಷಿಸಿ ಆಕೆಯ ತಲೆಗೂದಲನ್ನು ಸರಿಮಾಡುತ್ತಾಳೆ. ಆ ಮೇಲೆ, ದೀಪವನ್ನೆತ್ತಿಕೊಂಡು ಪಕ್ಕದ ಕೋಣೆಗೆ ಹೋಗಿ ಅಲ್ಲಿರುವ ಒಂದು ಟ್ರಂಕ್‌ನ ಎದುರು ಬಾಗಿ ಕೂತು ಬೀಗದ ಕೈ ಗೊಂಚಲಿಂದ ಒಂದನ್ನಾಯ್ದು ಬೀಗ ತೆಗೆದು ಟ್ರಂಕಿನಲ್ಲಿರುವ ಎರಡು ತಟ್ಟೆಗಳನ್ನು ಎತ್ತಿಕೊಳ್ಳುತ್ತಾಳೆ.

ಕ್ಷಯುವರ್ಧನ

ಸರ್ವಜಯಾ ಕೈಯಲ್ಲಿ ಗಂಟು ಹಿಡಿದು ಹೊರಬಾಗಿಲಿನಿಂದ ಹೊರಟು ನಡೆಯುತ್ತಿದ್ದಾಳೆ.

ಕ್ಷಯುವರ್ಧನ

ಸರ್ವಜಯಾ ಬೇರೆಯೊಂದು ಗಂಟನ್ನು ಹಿಡಿದು ಹೊರಬಾಗಿಲಿಂದ ಒಳಕ್ಕೆ ಪ್ರವೇಶಿಸುತ್ತಾಳೆ. ಮನೆಯ ಒಳಕ್ಕೆ ಹೋಗಿ, ಅಲ್ಲಿ ಒಂದು ಹರವಿಯ ಮುಚ್ಚಳ ತೆಗೆದು, ತಾನು ತಂದ ಗಂಟಿನಲ್ಲಿರುವ ಅಕ್ಕಿಯನ್ನು ಅದರೊಳಕ್ಕೆ ಸುರಿಯುತ್ತಾಳೆ.

ಕ್ಷೀಣನ

ವರ್ಧನ

ರಾಣುಳ ಮದುವೆಯು ಸಿದ್ಧತೆ ನಡೆದಿದೆ. ಬ್ಯಾಂಡ್‌ನವರು ಹಿತ್ತಾಳೆಯ ತಾಳ ಡ್ರಮ್‌ಗಳನ್ನು ಬಾರಿಸುತ್ತಿದ್ದಾರೆ. ಬಾರಿಸುತ್ತಿರುವ ಹಾಡು, ಇಂಗ್ಲೀಷ್‌ನ IT'S A LONG LONG WAY TO TIPPERARY ಎಂಬ ಹೆಸರಾದ ಹಳೇ ಹಾಡು. ಮಕ್ಕಳು, ಅವರ ಜತೆ ಅಪ್ಪೂ, ಊರಿನವರು, ಮುದುಕರು, ಮಜುಮ್‌ದಾರ್—ಮುಂತಾಗಿ ದೊಡ್ಡ ಆಸಕ್ತಿಯಿಂದ ಬ್ಯಾಂಡ್‌ನವರನ್ನು ಸುತ್ತಿ ನಿಂತಿದೆ.

ಮನೆಯ ಒಳಗೆ—ಊರಿನ ಹೆಂಗಸರು ಅಡುಗೆ ಕೆಲಸದಲ್ಲಿ ತೊಡಗಿದ್ದಾರೆ. ಹಣ್ಣು ತರಕಾರಿ ಹೆಚ್ಚುತ್ತಿದ್ದಾರೆ. ಶೇಜ್‌ಬೌ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾಳೆ. ಸರ್ವಜಯಾ ಕೂಡ ಅಲ್ಲಿ ಕೆಲಸದಲ್ಲಿ ತೊಡಗಿಕೊಂಡಿದ್ದಾಳೆ. ದುರ್ಗಾ ರಾಣುಳ ಪಕ್ಕದಲ್ಲಿ ಕೂತಿದ್ದಾಳೆ. ರಾಣುಳ ಪಾದಗಳಿಗೆ ಯಾರೋ ಅಲತಿಕೆ ಹಚ್ಚುತ್ತಿದ್ದಾರೆ.

ಮದುವೆ ಪ್ರಾರಂಭವಾಗಿದೆ. ಸರ್ವಾಲಂಕೃತ ವಧುವಾಗಿ ರಾಣು ಕೂತಿದ್ದಾಳೆ. ಪುರೋಹಿತ ಮಂತ್ರೋಚ್ಚಾರಣೆಯಲ್ಲಿ ಮಗ್ನನಾಗಿದ್ದಾನೆ. ದುರ್ಗಾ, ಕೂತಲ್ಲಿಂದ ಕಣ್ಣರಳಿಸಿ ನೋಡುತ್ತಿದ್ದಾಳೆ.

ಕ್ಷೀಣನ

(೨)

ಸರ್ವಜಯಾಳ ಮನೆಯಲ್ಲಿ—ನೀಲಮಣಿಯ ಪತ್ನಿ ಒಂದೊಂದೇ ಮಡಕೆಯನ್ನು ತೆಗೆದು ಪರಿಶೀಲಿಸುತ್ತಿದ್ದಾಳೆ. ಎಲ್ಲವೂ ಖಾಲಿ. ಒಂದರಲ್ಲಿ ಮಾತ್ರ ಒಂದೆರಡು ಮುಷ್ಟಿ ಧಾನ್ಯ ಕಾಣುತ್ತದೆ. ಅಲ್ಲಿಂದ ಆಕೆ, ಚಾವಡಿಗೆ ಬರುತ್ತಾಳೆ. ಸರ್ವಜಯಾ ಅಲ್ಲಿ ಆತಂಕಗೊಂಡು ಕೂತಿದ್ದಾಳೆ.

ನೀಲಮಣಿ ಪತ್ನಿ—ಯಾಕೆ ಹೀಗೆ ಮಾಡ್ತಿದೀಯೆ ? ಎಷ್ಟು ದಿನಾಅಂತ ಹೀಗಿರ್ತೀಯೆ ? ದಿನಾ ನಾನು ಇಲ್ಲಿ ಬರ್ತೀನೆ, ಹೇಳಬಾರದಾ ? ಯಾಕೆ ಹೇಳಲಿಲ್ಲ ? ನಾನು ನಿನಗೆ ಅಷ್ಟು ದೂರವಾ ?

ಸರ್ವಜಯಾ—(ಗಂಟಲು ಕಟ್ಟಿ) ನಾ ಮತ್ತೇನು ಮಾಡಲಿ, ನೀವೇ ಹೇಳಿ. ಸುದ್ದಿ ಬರತ್ತೆ ಬರತ್ತೆ ಅಂತ ಪ್ರತೀದಿನ ಕಾಯ್ತಾನೇ ಇದೀನಿ. ಆದರೆ ಏನೂ ಬರೋದಿಲ್ಲ. ಒಂದು ಕಾಗದಾನೂ ಇಲ್ಲ. ಈಗ ಐದು ತಿಂಗಳಾಯ್ತು.

ನೀಲಮಣಿ ಪತ್ನಿ— ದುರ್ಗಾ ನನ್ನ ಜತೆ ಬರ್ಲಿ. ಕಡೇಪಕ್ಷ ಇವತ್ತಿಗಾದರೂ ಏನಾದರೂ ಕೊಟ್ಟುಕಳಿಸ್ತೇನೆ.

ಆಕೆ ತನ್ನ ಸೆರಗಿನ ಗಂಟೆನಿಂದ ಒಂದು ನಾಣ್ಯ ಬಿಚ್ಚಿ ಕೊಡುತ್ತಾಳೆ.

ನೀಲಮಣಿ ಪತ್ನಿ— ತಗೋ, ಇದನ್ನ ತಗೊ. ಚಿಕ್ಕಮಗುವಿನ ಹಾಗೆ ಮಾಡಬೇಡ.

ಸರ್ವಜಯಾ— ಬೇಡ, ಬೇಡ ನಂಗೆ.

ನೀಲಮಣಿಯ ಪತ್ನಿ, ಆ ನಾಣ್ಯವನ್ನು ಅಲ್ಲೇ ಬೀಳಿಸಿ ತಾನು ಹೊರಡುತ್ತಾಳೆ. ಸರ್ವಜಯಾ ಆಕೆಯ ಸೀರೆ ಹಿಡಿದು ತಡೆದು ನಿಲ್ಲಿಸುತ್ತಾಳೆ.

ನೀಲಮಣಿಯ ಪತ್ನಿ— ಬಿಡು, ಅದ್ಯಾಕೆ ಹೀಗೆ ಮಾಡ್ತೀಯ ?

ಸರ್ವಜಯಾ— ಬೇಡ. ದೇವರಾಣೆ. ಹಾಗೆಲ್ಲ ಮಾಡಬೇಡಿ.

## ಕ್ಷಯವರ್ಧನ

ಸರ್ವಜಯಾ ಚಾವಡಿಯಮೇಲೆ ಚಿಂತಿಸುತ್ತ ಕೂತಿದ್ದಾಳೆ. ಅಪೂ ಬರುವ ಸದ್ದು ಕೇಳಿ ಆ ಕಡೆ ನೋಡುತ್ತಾಳೆ.

ಅಪೂ— ಕಾಗದ, ಕಾಗದ—....

ಸರ್ವಜಯಾ ಕಣ್ಣೊರೆಸಿಕೊಂಡು ಮೇಲಕ್ಕೆದ್ದು ಮುಂದಕ್ಕೆ ಧಾವಿಸುತ್ತಾಳೆ. ಅಪೂ ಅಂಗಳ ಸುತ್ತುತ್ತ ಓಡುತ್ತಿದ್ದಾನೆ. ಆಮೇಲೆ, ನಿಂತು ಓದತೊಡಗುತ್ತಾನೆ.

ಅಪೂ— ಚಿ|| ಸೌ|| ಸರ್ಬೋಜಯಾ ದೇವಿ........

ಸರ್ವಜಯಾ ಓಡಿಹೋಗಿ ಆತನನ್ನು ಹಿಡಿದು ಅವನ ಕೈಯಿಂದ ಕಾಗದ ಕಿತ್ತುಕೊಂಡು ಓದುತ್ತಾಳೆ.

ಹರಿಹರನ ದನಿ— ಈ ಹಿಂದಕ್ಕೆ ನಾಲ್ಕು ತಿಂಗಳ ಕಾಲವೂ ಪತ್ರ ಬರೆಯಲಿಕ್ಕೆ ಆಗಲಿಲ್ಲ. ಪ್ರಯುಕ್ತ ನಿನಗೆ ತುಂಬಾ ಯೋಚನೆಯಾಗಿರಲಿಕ್ಕೆ

ಬೇಕು. ಈಗ ಸಮಸ್ತವೂ ಮಂಗಲಕರವೇ ಆಗಿರುತ್ತದೆ. ಈಚೆಗೆ ಉತ್ತಮ ಸಂಪಾದನೆಯೂ ಆಯಿತು. ಶೀಘ್ರದಲ್ಲಿಯೇ ಮನೆಗೆ ವಾಪಸ್ಸಾಗುತ್ತಿದ್ದೇನೆ. ನಮ್ಮ ಅದೃಷ್ಟವು ಬದಲಾಗುತ್ತಿದೆಯೆಂದು ಕಾಣುತ್ತಲಿದೆ. ಕಡೆಯಲ್ಲಿ ಸಮಸ್ತವೂ ಮಂಗಳವಾಗುತ್ತದೆಂತ ಭಾವಿಸುವುದು.

ಕ್ಷಯವರ್ಧನ

ಕಮಲದೆಲೆಗಳು ಹಾಸಿರುವ ಕೊಳದ ನೀರಿನ ಕನ್ನಡಿಯಮೇಲೆ ಚಿಟ್ಟೆಯ ಮೋಹಕ ನೃತ್ಯ ನಡೆದಿದೆ.

(೩)

ಕ್ಷಯವರ್ಧನೆ

ಸರ್ವಜಯಾ ಜಾಪಡಿಯಮೇಲೆ ಒರಗಿಕೊಂಡಿದ್ದಾಳೆ. ಸೆಕೆಯಿಂದ ಬಳಲಿ ಬೀಸಣಿಗೆ ಬೀಸಿಕೊಳ್ಳುತ್ತಿದ್ದಾಳೆ. ದುರ್ಗಾ, ಒಳಗೆ ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಹಣೆಗೆ ಕುಂಕುಮವಿಟ್ಟುಕೊಳ್ಳುತ್ತಾಳೆ ಅಲ್ಲಿಂದ ಎದ್ದು ಅಂಗಳದ ಮೂಲೆಗೆ ಹೋಗಿ, ತುಲಸಿ ಗಿಡ ನೆಟ್ಟು ಅದಕ್ಕೆ ಪೂಜಿಸುತ್ತಾಳೆ. (ಇದು ಕನ್ಯೆಯರು ಮಾಡುವ ಒಂದು ವ್ರತ.) ಬಾಯಲ್ಲಿ ಏನೋ ಮಣಮಣಿಸುತ್ತ ಗಿಡದಮೇಲೆ ನೀರು ಸುರಿಯುತ್ತಾಳೆ.

ಇದೇ ಸಮಯಕ್ಕೆ ಅಪೂ ಮಂಡಕ್ಕಿ ತಿನ್ನುತ್ತ ಶಾಲೆಯಿಂದ ವಾಪಸಾಗುತ್ತಿದ್ದಾನೆ. ತಟ್ಟನೆ ಗುಡುಗಿನ ಸದ್ದು ಪ್ರಾರಂಭವಾಗಿ ಮಳೆಮೋಡಗಳು ಒಟ್ಟಯಿಸತೊಡಗುತ್ತವೆ. ಹೊಲದಲ್ಲಿ ಕೆಲಸ ಮಾಡುತ್ತಿರುವ ಜನ ಮಳೆಯಿಂದ ಆಶ್ರಯ ಪಡೆಯಲು ಧಾವಿಸತೊಡಗುತ್ತಾರೆ. ಅಪೂ, ತನ್ನ ಪುಸ್ತಕ ತೊಯ್ದೀತೆಂದು, ಬೇಗ ಮನೆ ಸೇರಲು ಓಡತೊಡಗಿದ್ದಾನೆ.

ದುರ್ಗಾ, ಪೂಜೆಯನ್ನು ತ್ವರೆಗೊಳಿಸಿದ್ದಾಳೆ.

ನೋಡ ಕವಿದುಕೊಳ್ಳುತ್ತಿರಲು ದುರ್ಗಾ ಮತ್ತು ಅಪೂ ಮನೆಯಿಂದ ಹೊರಡುತ್ತಿದ್ದಾರೆ. ಸರ್ವಜಯಾ ತಡೆಯಲು ಯತ್ನಿಸಿ ವಿಫಲಳಾಗುತ್ತಾಳೆ. ಮಕ್ಕಳು ಹೊಲದ ಹಾದಿ ಹಿಡಿದು ಓಡುತ್ತಾರೆ. ಸರ್ವಜಯಾ ಅಂಗಳಕ್ಕೆ ಬಂದು ಒಣಹಾಕಿದ ಬಟ್ಟೆಗಳನ್ನು ತೆಗೆದು ಒಳಗೊಯ್ಯುತ್ತಾಳೆ.

ಕೆರೆಯ ದಂಡೆಯಮೇಲೆ ಮೀನುಹಿಡಿಯಲು ಕೂತಿರುವ ಬೊಕ್ಕತಲೆಯವನೊಬ್ಬನ ನೆತ್ತಿಯಮೇಲೆ ಮೊದಲ ಮಳೆಹನಿ ಟಪ್ಪೆಂದು ಉದುರಿ, ಛಿದ್ರಗೊಳ್ಳುತ್ತದೆ. ಮಳೆ ಕ್ರಮೇಣ ಜೋರಾಗುತ್ತಿದೆ.

ಅಪೂ ಮಳೆಗೆ ಹೆದರಿ, ಮರವೊಂದರ ಬುಡದಲ್ಲಿ ತೊಯ್ದು ನಡುಗುತ್ತ ನಿಂತಿದ್ದಾನೆ. ದುರ್ಗಾ ಸುರಿಯುವ ಮಳೆಗೆ ಮುಖನೆತ್ತಿಕೊಟ್ಟುಕೊಂಡು ಖುಶಿಯಿಂದ ಸುತ್ತ ತಿರುಗ ತೊಡಗಿದ್ದಾಳೆ. ಆಮೇಲೆ, ಚಳಿಯಿಂದ ಕೈಕಟ್ಟಿ ನಡುಗುತ್ತ ನಿಂತಿರುವ ಅಪೂನ ಹತ್ತಿರ ಬಂದು ಅವನನ್ನು ಅಪ್ಪಿಕೊಂಡು ನಿಲ್ಲುತ್ತಾಳೆ. ದುರ್ಗಾ, 'ಮಳೆಯೇ ಮಳೆಯೆ ಆ ಊರಿಗೆ ಹೋಗು' ಎಂಬ ಸಾಲನ್ನು ಉಚ್ಚರಿಸತೊಡಗುತ್ತಾಳೆ.

ಸರ್ವಜಯಾ ಮಳೆಯಲ್ಲಿ ತೊಯ್ದುಕೊಂಡು ಮನೆಯಕಡೆ ಬರುತ್ತಿದ್ದಾಳೆ. ಅಲ್ಲಿ, ದಾರಿಬದಿಯ ಬೇರೆಯವರ ತೆಂಗಿನಮರವೊಂದರಿಂದ ನೆಲಕ್ಕೆ ಉದುರಿರುವ ಕಾಯಿಯನ್ನು ಕಾಣುತ್ತಾಳೆ. ಸುತ್ತ ಒಮ್ಮೆ ನೋಡಿ, ತಟ್ಟನೆ ಅದನ್ನೆತ್ತಿಕೊಂಡು ಮನೆಗೆ ಧಾವಿಸುತ್ತಾಳೆ.

ಮರದ ಕೆಳಗೆ ನಿಂತ ದುರ್ಗಾ ಮತ್ತೆಮತ್ತೆ ಸೀನತೊಡಗುತ್ತಿದ್ದಾಳೆ.

**ಕ್ಷಯವರ್ಧನ**

(೪)

ಮನೆಯಲ್ಲಿ ದುರ್ಗಾ ಹಾಸಿಗೆಯಮೇಲೆ ಮಲಗಿದ್ದಾಳೆ. ಡಾಕ್ಟರ್, ಸ್ಟೆಥೋಸ್ಕೋಪ್ ಇಟ್ಟು ಪರೀಕ್ಷಿಸುತ್ತಿದ್ದಾನೆ.

ಡಾಕ್ಟರ್— ಎಲ್ಲಮ್ಮಾ, ನಿನ್ನ ನಾಲಗೆ ತೋರಿಸು.

ದುರ್ಗಾ ಅಪೂ ಕಡೆ ನೋಡಿ ಮುಗುಳುನಗುತ್ತಾಳೆ. ಅವನೂ ನಗುತ್ತಾನೆ. ಅಲ್ಲಿ, ಸರ್ವಜಯಾ, ನೀಲಮಣಿ ಮತ್ತು ನೀಲಮಣಿಯಪತ್ನಿ ಕೂಡ ನಿಂತಿದ್ದಾರೆ.

ನೀಲಮಣಿ— ಏನಾದ್ರೂ ಸುದ್ದಿ ಬಂತಾ ?

ಸರ್ವಜಯಾ— ಕಾಗದ ಬರೆದಿದ್ರು. ಈ ತಿಂಗಳು ಬರ್‍ತಾರಂತೆ.

ನೀಲಮಣಿ— ಅವನು ಯಾಕೆ ಹಾಗೆ ಸುಮ್ನೆ ತಿರುಗ್ತಾನೋ ಏನೋ !

ಡಾಕ್ಟರ್— ಸಾಬು ಅಕ್ಕಿ ಇದೆಯಾ ?

ನೀಲಮಣಿ ಪತ್ನಿ— ಇಲ್ಲಿ ಇಲ್ಲದಿದ್ರೆ ನಾನು ಸ್ವಲ್ಪ ಕಳಿಸಿಕೊಡ್ತೇನೆ.

ಡಾಕ್ಟರ್— ಸರಿ. ಅವಳಿಗೆ ಅದನ್ನೇ ಕೊಡಿ. ಜ್ವರ ಏನಾದ್ರೂ ಹೆಚ್ಚಾದ್ರೆ ಹಣೆಗೆ ಒದ್ದೆಪಟ್ಟಿ ಹಾಕಿ. ಏನೂ ಯೋಚನೆ ಮಾಡೋದು ಬೇಡ. ಥಂಡಿ ಆಗದ ಹಾಗೆ ಸ್ವಲ್ಪ ನೋಡಿಕೊಳ್ಳಿ. ನೀಲಮಣಿ, ಹೋಗೋಣವಾ ?

ನೀಲಮಣಿ— ಡಾಕ್ಟ್ರೇ, ಹೇಗೆ ಪರಿಸ್ಥಿತಿ ?

ಇಬ್ಬರೂ ಕೋಣೆಯಿಂದ ನಿಷ್ಕ್ರಮಿಸುತ್ತಾರೆ.

ದುರ್ಗಾ— ಅಪೂ....

ಅಪೂ— ಊಂ ?

ದುರ್ಗಾ— ನಂಗೆ ಹುಷಾರಾದಮೇಲೆ ಹೋಗಿ ರೈಲು ನೋಡಿ ಬರೋಣ ಆಯಿತಾ ?

ಅಪೂ— ಹುಂ.

ದುರ್ಗಾ— ಮುಂಚೆ ಹೋಗ್ಬೇಕು. ರೈಲು ಬರೋಕೆ ಮೊದಲೇ ಅಲ್ಲಿರ ಬೇಕು.

ಅಪೂ— ಹುಂ.

## ಕ್ಷಯವರ್ಧನ

ಹೋಭಾಗದಲ್ಲಿ ಮಿಠಾಯಿ ಮಾರುವವ ನಡೆದು ಹೋಗುತ್ತಿದ್ದಾನೆ. ಕೋಣೆಯಲ್ಲಿ ಮಲಗಿರುವ ದುರ್ಗಾ ಈಗ ಆತನನ್ನು ನೋಡಲಾರಳು. ಆಕೆ ಜ್ವರದಿಂದ ಬಳಲಿ ಕಣ್ಣು ಮುಚ್ಚಿಕೊಂಡು ಮಲಗಿದ್ದಾಳೆ.

ರಾತ್ರಿ. ಸರ್ವಜಯಾ, ದುರ್ಗಾಳ ಪಕ್ಕದಲ್ಲಿ ಮಂಡಿಯೂರಿ ಕೂತು ಅವಳ ಹಣೆಗೆ

ತಣ್ಣೀರು ಪಟ್ಟಿ ಹಾಕುತ್ತಿದ್ದಾಳೆ. ಕಿಟಕಿ ಹತ್ತಿರ ಮಲಗಿರುವ ಅಪೂ ಗಾಢ ನಿದ್ರೆಯಲ್ಲಿದ್ದಾನೆ. ಸರ್ವಜಯಾ ಮಾತ್ರ ಬಟ್ಟೆ ಒದ್ದೆ ಮಾಡಿ ಹಣೆಗಿಡುತ್ತಿದ್ದಾಳೆ. ಅಲ್ಲೇ ತೂಕಡಿಸುತ್ತಾಳೆ. ಬಾಗಿಲು ಬಡಿಗುಕೊಳ್ಳುವ ಸದ್ದಿನಿಂದ ಎಚ್ಚರಾಗುತ್ತಾಳೆ. ಹೊರಗೆ ಭಯಂಕರ ಬಿರುಗಾಳಿ. ಅದರ ಒತ್ತಡಕ್ಕೆ, ಅಗುಳಿಯ ಶಕ್ತಿ ಸಾಲದೆ ಬಾಗಿಲು ಅದರುತ್ತದೆ. ಕಿಟಕಿಗೆ ನೇಲಿಸಿರುವ ಗೋಣಿ ಗಾಳಿಗೆ ಹಾರಿ ಪಟಗುಟ್ಟುತ್ತಿದೆ. ಗಾಳಿಯ ಹೊಡೆತ ಹೆಚ್ಚಾಗುತ್ತಲೇ ಇದೆ. ತಾಯಿ ಮತ್ತೆಮತ್ತೆ ದುರ್ಗಾಳ ಕಡೆ ಗಮನಿಸತೊಡಗುತ್ತಾಳೆ; ಬಾಗಿಲ ಕಡೆ ಕಿಟಕಿಯ ಕಡೆ ಆತಂಕದಿಂದ ನೋಡುತ್ತಾಳೆ. ಕಿಟಕಿ ಬಾಗಿಲುಗಳ ಜಡಿತ ಹೆಚ್ಚಾಗುತ್ತಾ ನಡೆದಿದೆ. ಮಿಂಚು ಫಳಗುಟ್ಟುತ್ತಿದೆ. ಕೋಣೆಯ ದೀಪ ಕಂಪಿಸುತ್ತದೆ. ಕಿಟಕಿಗೆ ಹಾಕಿದ ಗೋಣಿ ಹರಿದುಬಿದ್ದು ಮಳೆಯ ಹನಿಗಳು ಒಳಕ್ಕೆ ತೂರಿಬರುತ್ತವೆ. ಸರ್ವಜಯಾ ಎದ್ದುಹೋಗಿ ಅದನ್ನು ಸರಿಪಡಿಸುತ್ತಾಳೆ. ಅಷ್ಟರಲ್ಲಿ ಬಾಗಿಲ ಅಗಳಿ ಮುರಿದು, ಬಾಗಿಲು ತೆಗೆದುಕೊಳ್ಳುತ್ತದೆ. ಸರ್ವಜಯಾ ಗೋಣಿಯನ್ನೆತ್ತಿ ಕಟ್ಟಿ, ಬಾಗಿಲು ಮುಚ್ಚಿ ಅದಕ್ಕೆ ಒಂದು ಟ್ರಂಕನ್ನು ಆನಿಸಿ ಇಡುತ್ತಾಳೆ. ಗುಡುಗು, ಮಿಂಚು, ಭಾರೀ ಮಳೆಯ ಉತ್ಪಾತ. ದುರ್ಗಾ ನಿದ್ದೆಮಾಡಲಾಗದೆ ಆತಂಕಗೊಳ್ಳುತ್ತಿದ್ದಾಳೆ. ಆಕೆ, ತಾಯಿಯನ್ನು ಕೂಗುತ್ತ ಹೊರಳುತ್ತಾಳೆ. ಅಪೂ ನಿರಾತಂಕವಾಗಿ ನಿದ್ದೆಮಾಡುತ್ತಿದ್ದಾನೆ. ಸರ್ವಜಯಾ ಅಪೂಗೆ ಹೊದಿಕೆ ಹೊದೆಸುತ್ತಿರಲು, ದುರ್ಗಾ ತನ್ನ ಎರಡೂ ಕೈಗಳನ್ನೆತ್ತಿ ತಾಯಿಯನ್ನು ಕೂಗುತ್ತಾಳೆ. ಸರ್ವಜಯಾ ಅವಳ ಬಳಿಗೆ ಹೋಗಿ, ಆಕೆಯನ್ನು ಸಮಾಧಾನಗೊಳಿಸಲು ಹವಣಿಸುತ್ತಾಳೆ; ಆಕೆಯ ಮೈಮೇಲೆ ಬಾಗಿ ಆಕೆಯನ್ನು ಅವಚಿಕೊಳ್ಳುತ್ತಾಳೆ. ಅಷ್ಟರಲ್ಲಿ ಮಿಂಚು ಕೋರೈಸುತ್ತದೆ. ಬಾಗಿಲಮೇಲಿರುವ ಗಣಪತಿ ವಿಗ್ರಹ ಕಂಪಿಸುತ್ತಿದ್ದು, ಒಮ್ಮೆ ಮಿಂಚಿನಿಂದ ಇಡೀ ಬೆಳಗುತ್ತದೆ.

**ಕ್ಷೀಣನ**

## ಭಾಗ : ಮೂರು

(೧)

**ವರ್ಧನ**

ಹಗಲು. ಅಪೂ, ನೀಲಮಣಿ ಬಾಬೂನ ಮನೆಯೆದುರು ನಿಂತು ಬಾಗಿಲು ತಟ್ಟುತ್ತಾನೆ, ನೀಲಮಣಿ ಪತ್ನಿ ಬಂದು ಬಾಗಿಲು ತೆರೆಯುತ್ತಾಳೆ,

ನೀಲಮಣಿ ಪತ್ನಿ— ಏನು ಸಮಾಚಾರ ?

ಅಪೂ— ದೀದಿಗೆ ಹುಷಾರಿಲ್ಲ. ಅಮ್ಮ ಕರಕೊಂಡು ಬರೋಕೆ ಹೇಳಿದಾಳೆ.

ನೀಲಮಣಿ ಪತ್ನಿ— ಸರಿ, ನಾನು ಬರ್‍ತೀನೆ. (ಹಿಂದಕ್ಕೆ ನೋಡಿ) ಬಿನಿ, ನೀನು ಅಂಗಳ ಗುಡಿಸು. ನಾನು ಹೋಗಿ ಏನಾಗಿದೆ ನೋಡಿ ಬರ್‍ತೀನೆ.

ಆಕೆ ಅಪೂನ ಜತೆ ಹೊರಡುತ್ತಾಳೆ.

ಕ್ಷಯುವರ್ಧನ

ನೀಲಮಣಿ ಪತ್ನಿ ಮತ್ತು ಅಪೂ ಹರಿಹರನ ಮನೆಯ ಅಂಗಳದೊಳಕ್ಕೆ ಪ್ರವೇಶಿಸುತ್ತಿದ್ದಾರೆ. ಅಂಗಳವೆಲ್ಲಾ ಮಳೆನೀರು ಕೆಸರುಗಳಿಂದ ತುಂಬಿದೆ. ಅಡುಗೆಮನೆ ಕೊಟ್ಟಿಗೆಗಳೆಲ್ಲ ಮುರಿದುಬಿದ್ದಿವೆ. ಅಡುಗೆಮನೆಯಲ್ಲಿ ನೇತುಹಾಕಿರುವ ಮಡಕೆಗಳು ಬಯಲಲ್ಲಿ ತೂಗುತ್ತಿರುವಂತೆ ಕಾಣುತ್ತಿವೆ. ಅವರು ಮಲಗುವ ಕೋಣೆಗೆ ಬರುತ್ತಾರೆ. ಅಲ್ಲಿ, ಸರ್ವಜಯಾ ದುರ್ಗಾಳ ಶವವನ್ನು ತೊಡೆಯಮೇಲಿಟ್ಟುಕೊಂಡು ಕಲ್ಲಾಗಿ ಕೂತಿದ್ದಾಳೆ.

ನೀಲಮಣಿ ಪತ್ನಿ— ಅಪೂ, ಹೋಗಿ ನಿಮ್ಮ ಚಿಕ್ಕಪ್ಪನ್ನ ಕರಕೊಂಡು ಬಾ. ನಾ ಹೇಳಿದೆ ಅನ್ನು.

ಅಪೂ— ಅಕ್ಕ ನಿದ್ರೆ ಮಾಡ್ತಿದಾಳಾ ?

ನೀಲಮಣಿ ಪತ್ನಿ— ಹೌದಪ್ಪಾ ಹೌದು. ಹೋಗು, ಬೇಗ ಹೋಗು. ಹೋಗು ಜಾಣ.

ನೀಲಮಣಿ ಪತ್ನಿ ನಿಧಾನವಾಗಿ ಹತ್ತಿರಕ್ಕೆ ಹೋಗಿ ದುರ್ಗಾಳ ಶವವನ್ನು ನೋಡುತ್ತಾಳೆ. ಆಮೇಲೆ ಮೆಲ್ಲಗೆ ಸರ್ವಜಯಾಳ ಪಕ್ಕದಲ್ಲಿ ಕೂತು, ಆಕೆಯ ತಲೆಯನ್ನು ತನ್ನ ಭುಜಕ್ಕೆ ಆನಿಸಿಕೊಂಡು ಮೆಲ್ಲಗೆ ನೇವರಿಸತೊಡಗುತ್ತಾಳೆ.

ಕ್ಷಯುವರ್ಧನ

ಕೊಳದ ಬಳಿ. ಅಪೂ ಬೆರಳಲ್ಲಿ ತನ್ನ ಹಲ್ಲು ತಿಕ್ಕುತ್ತ ನಿಂತಿದ್ದಾನೆ. ಸೊರಗಿಹೋಗಿರುವ ಸರ್ವಜಯಾ ಬಾಚದ ಮುಡಿ ಬಿಟ್ಟುಕೊಂಡು ಬಾವಿಯ ನೀರೆಳೆಯುತ್ತಾಳೆ.

ಅಪೂ ಸ್ನಾನ ಮುಗಿಸಿ ಮನೆಯೊಳಕ್ಕೆ ಬರುತ್ತಿದ್ದಾನೆ. ಅಂಗಳದಲ್ಲಿ ಕೆಸರಿನ ಮಧ್ಯೆ ಹಾಸಿರುವ ಒಂದೊಂದೇ ಕಲ್ಲುಗಳ ಮೇಲೆ ಕಾಲಿಟ್ಟು ಹಾರುತ್ತ ಮನೆಯೊಳಕ್ಕೆ ಪ್ರವೇಶಿಸುತ್ತಾನೆ. ಒಳಗೆ ಹೋಗಿ ಕೂದಲು ಬಾಚಿಕೊಂಡು ಹೊರಗೆ ಚಾವಡಿಗೆ ಬರುತ್ತಾನೆ. ಮೈಮೇಲೆ ಶಾಲು ಹೊದೆದುಕೊಂಡು, ಒಂದು ಸೀಸೆಯನ್ನು ಕೈಯಲ್ಲಿ ಹಿಡಿದು ಅಂಗಳಕ್ಕಿಳಿಯುತ್ತಾನೆ. ಅಲ್ಲಿ, ಸ್ವಲ್ಪ ತಡೆದು ತಲೆಯೆತ್ತಿ ಆಕಾಶದ ಕಡೆ ನೋಡಿ, ಪುನಃ ಮನೆಯೊಳಕ್ಕೆ ಹೋಗಿ ಒಂದು ಕೊಡೆ ತೆಗೆದುಕೊಂಡು ಹೊರಬರುತ್ತಾನೆ. ಸೀಸೆ ಕೊಡೆಗಳನ್ನು ಹಿಡಿದು, ಮನೆಯಿಂದ ಹೊರಟು ಕಾಲುದಾರಿಯಲ್ಲಿ ಹಿರಿಯರ ಗತ್ತಿನಲ್ಲಿ ಗಂಭೀರವಾಗಿ ನಡೆದುಹೋಗುತ್ತಾನೆ.

## ಕ್ಷಯುವರ್ಧನ

ಅಡುಗೆಮನೆಯಲ್ಲಿ ಸರ್ವಜಯಾ ಹತಾಶಳಾಗಿ ಕೂತಿದ್ದಾಳೆ. ಹೊರಗೆ ಚಾವಡಿಯಲ್ಲಿ ಬಿನಿ ಪ್ರವೇಶಿಸುತ್ತಾಳೆ. ಅವಳ ಕೈಯಲ್ಲಿ ತರಕಾರಿ ಬುಟ್ಟಿಯಿದೆ.

ಬಿನಿ— ಚಿಕ್ಕಮ್ಮ, ಅಮ್ಮ ಇದನ್ನ ಕಳಿಸಿದಾಳೆ. ಇಲ್ಲೇ ಇಡ್ತೇನೆ.

ಬುಟ್ಟಿಯನ್ನು ಅಲ್ಲಿಟ್ಟು ಆಕೆ ತಿರುಗಿ ನಡೆದುಬಿಡುತ್ತಾಳೆ. ಆಕೆ ತಿರುಗಿದಾಗ ಅವಳ ನಾಲ್ಕು ಹೆರಳಿನ ಜಡೆ ಕಾಣಿಸುತ್ತದೆ.

## ಕ್ಷಯುವರ್ಧನ

ಗಿಡಮರಗಳ ಮೂಲಕ ಹಾದುಬರುವ ಕಾಲುದಾರಿಯಲ್ಲಿ ಹರಿಹರ ಬರುತ್ತಿದ್ದಾನೆ. ಆತ, ಮನೆಯ ಸಮೀಪಕ್ಕೆ ಬಂದು ಮಕ್ಕಳನ್ನು ಕರೆಯುತ್ತಾನೆ. ಅಡುಗೆಮನೆಯಲ್ಲಿ ಕೂತಿರುವ ಸರ್ವಜಯಾ ಅವನ ಧ್ವನಿ ಕೇಳಿ ನಿಟ್ಟುಸಿರುಬಿಡುತ್ತಾಳೆ. ಹರಿಹರ ಹೊರಗಿನಿಂದ ಮಲಗುವ ಕೋಣೆಯ ಕಿಟಕಿಯಲ್ಲಿ ಇಣುಕಿ ನೋಡುತ್ತಾನೆ. ಮುಂದೆ ಹೊರಬಾಗಿಲ ಹತ್ತಿರ ಬರುತ್ತಾನೆ. ಪಾಗಾರದಮೇಲೆ ಒಂದು ಭಾರೀ ಮರ ಮುರಿದುಬಿದ್ದಿರುವುದನ್ನು ಕಾಣುತ್ತಾನೆ; ಮುರಿದು ಛಿದ್ರವಾಗಿ ಬಿದ್ದಿರುವ ಕೊಟ್ಟಿಗೆ ಕಣ್ಣಿಗೆ

ಬೀಳುತ್ತದೆ.

ಹರಿಹರ— ಇನ್ನೊಂದು ನಾಲ್ಕು ದಿನ ಹಾಗೇ ಇದ್ದಿದ್ರೆ........

ಅಂಗಳದೊಳಕ್ಕೆ ಬರುತ್ತಾನೆ. ಯಾರೂ ಕಾಣಿಸದಿರುವುದರಿಂದ ಕಣ್ಣಾಡಿಸಿ ಹುಡುಕುತ್ತಾನೆ.

ಹರಿಹರ— ಅಪೂ........ ದುರ್ಗಾ........ ಓ, ನೀನು ಇದೀಯಾ ?

ಸರ್ವಜಯಾ ತಲೆಯಮೇಲೆ ಸೆರಗೆಳೆದುಕೊಂಡು ಒಳಗಿನಿಂದ ಬರುತ್ತಿದ್ದಾಳೆ.

ಸರ್ವಜಯಾ— ಬನ್ನಿ.

ಆಕೆ ಒಳಗಿನಿಂದ ನೀರು ತಂದು ಆತನಿಗೆ ಕಾಲು ತೊಳೆಯಲು ಕೊಟ್ಟು ಎದ್ದು ನಿಲ್ಲುತ್ತಾಳೆ. ಆತ ಆಕೆಯನ್ನು ದಿಟ್ಟಿಸಿ ನೋಡುತ್ತಾನೆ; ಆಮೇಲೆ ಸುತ್ತಲೂ ದಿಟ್ಟಿಸುತ್ತಾನೆ.

ಹರಿಹರ— ಹೇಗಿದೀಯೆ ? ಮಕ್ಕಳೆಲ್ಲಿ ? ಹೊರಗೆ ಹೋಗಿದಾರಾ ?

ಸರ್ವಜಯಾ ಮಾತಾಡುವುದಿಲ್ಲ. ಮೆಟ್ಟಲಿಳಿಯಲು ಮುಂದಾಗುತ್ತಾಳೆ. ಆತ, ಆಕೆಯನ್ನು ತಡೆದು ನಿಲ್ಲಿಸುತ್ತಾನೆ.

ಹರಿಹರ— ಯಾಕೆ, ಎಲ್ಲಿಗೆ ಹೋಗ್ತಾ ಇದೀಯೆ ? ಇಲ್ನೋಡು, ಏನೇನು ತಂದಿದೇನೆ ಅಂತ. ನೋಡೋದಿಲ್ವಾ ? ನನಗೆ, ಇದಕ್ಕೂ ಮುಂಚೆ ಬರೋದಕ್ಕೆ ಆಗಲಿಲ್ಲ. ಏನೇನೋ ತೊಂದರೆ. ಎಲ್ಲೆಲ್ಲೋ ಅಲೀಬೇಕಾಯ್ತು. ಆದರೆ, ರಾಣಾಘಾಟ್‌ಗೆ ಹೋದಾಗ, ಅದೃಷ್ಟ ಚನ್ನಾಗಿತ್ತು........ ನೋಡು, ಇಲ್ಲಿ ನೋಡು. ಇವೆಲ್ಲ ಚಂದನಪುರದ ಜಾತ್ರೇಲಿ ತಗೊಂಡಿದ್ದು. ಇದು ನೋಡು, ಲಟ್ಟಣಿಗೆ........ ಮತ್ತೆ, ಒಂದು ಲಕ್ಷ್ಮೀದೇವರ ಪಟ ಬೇಕು ಅಂದಿದ್ದೆಯಲ್ಲ, ತಂದಿದೇನೆ. ಅದಕ್ಕೆ ಗಾಜು ಕೂಡ ಹಾಕಿಸ್ಕೊಂಡು ಬಂದಿದೇನೆ........ ಈ ಸೀರೆ ದುರ್ಗಾಗೆ........ ಚೆನ್ನಾಗಿಲ್ವಾ ?........ ಮತ್ಯಾಕೆ ಹಾಗಿದೀಯಾ ? ....ನಾ ಮನೆಗೆ ಬಂದೆನಲ್ಲಾ........

ಸರ್ವಜಯಾ, ಆತ ಕೊಟ್ಟ ಸಾಮಾನುಗಳನ್ನೆಲ್ಲಾ ಒಂದೊಂದೇ ಮುಟ್ಟಿ ನೋಡುತ್ತಾಳೆ. ಆದರೆ ಆಕೆ ಎಚ್ಚರವಿಲ್ಲದೆ ಯಾಂತ್ರಿಕವಾಗಿ ಅವನ್ನೆಲ್ಲ ಮುಟ್ಟುತ್ತಿದ್ದಾಳೆ

ಎನ್ನಿಸುತ್ತದೆ. ಆತ ಸೀರೆಯನ್ನು ತೋರಿಸಿದಾಗ ಮಾತ್ರ ಆಕೆಯ ಸಂಯಮ ಕಟ್ಟೆ ಯೊಡೆಯುತ್ತದೆ. ಸೀರೆಯನ್ನು ಮುಖಕ್ಕೆತ್ತಿಕೊಂಡು ವಿಹ್ವಲಳಾಗಿ ಆಕ್ರಂದಿಸುತ್ತಾಳೆ; ನೆಲಕ್ಕೆ ಕುಸಿಯುತ್ತಾಳೆ. ಹರಿಹರ ಆಕೆಯನ್ನು ಮುಟ್ಟಿ ಅಲುಗಿಸಿ, ಆಕೆಗೆ ಏನಾಗಿದೆ ಯೆಂದು ತಿಳಿಯಲು ಯತ್ನಿಸುತ್ತಾನೆ. ಕ್ರಮೇಣ, ಅವನಿಗೆ ಸಂಗತಿ ಹೊಳೆಯುತ್ತದೆ. ಆದರೆ ಅದನ್ನು ನಂಬಲು ಸಾಧ್ಯವಾಗದು ಎನ್ನುವಂತೆ ವಿಹ್ವಲನಾಗಿ ಸರ್ವಜಯಾಳ ಮೇಲೇ ಕುಸಿಯುತ್ತಾನೆ. ಅದೇ ಹೊತ್ತಿಗೆ ಹೊರಗಿನಿಂದ ಪ್ರವೇಶಿಸಿದ ಅಪೂ, ಏನೆಂದು ತಿಳಿಯದೆ ದಿಙ್ಮೂಢನಾಗಿ ಭಯಗೊಂಡು ಗೊಂದಲದಲ್ಲಿ ಹಾಗೇ ನಿಲ್ಲುತ್ತಾನೆ.

ರಾತ್ರಿ. ಹರಿಹರ ಹಾಸಿಗೆಯಲ್ಲಿ ಯೋಚಿಸುತ್ತ ಬಿದ್ದುಕೊಂಡಿದ್ದಾನೆ. ಬದಿಯಲ್ಲಿ ಸರ್ವಜಯಾ ಮತ್ತು ಅಪೂ ಮಲಗಿ ನಿದ್ರಿಸುತ್ತಿದ್ದಾರೆ. ದೂರದಿಂದ ಅಸ್ಪಷ್ಟವಾಗಿ ರೈಲಿನ ಸಿಳ್ಳು ಕೇಳಿಬರುತ್ತದೆ.

## ಕ್ಷಯವರ್ಧನ

ಮನೆಯಲ್ಲಿ ಹರಿಹರ ಒಂದು ಟ್ರಂಕಿನಿಂದ ಕಾಗದಗಳನ್ನು ಝಾಡಿಸುತ್ತಿದ್ದಾನೆ. ಅವನ ಪಕ್ಕದಲ್ಲಿ ನೀಲಮಣಿಬಾಬು ಕೂತಿದ್ದಾನೆ.

ಹರಿಹರ— (ಅಪೂಗೆ) ಮಗು, ಇವನ್ನೆಲ್ಲ ತಗೊಂಡುಹೋಗಿ, ಅಂಗಳ ದಲ್ಲಿ ಮಂಚದ ಮೇಲೆ ಇಡು.

ಒಳಗೆ ನೀಲಮಣಿಯ ಪತ್ನಿ ಸರ್ವಜಯಾಗೆ ಗಂಟುಕಟ್ಟಲು ನೆರವಾಗುತ್ತಿದ್ದಾಳೆ.

ಸರ್ವಜಯಾ— ನಿಜವಾಗಿ ಹೇಳೋದಾದ್ರೆ, ಈ ಮನೇಮೇಲೆ ನನಗೆ ಇರೋ ಆಸೆಯೆಲ್ಲಾ ಇಂಗಿಹೋಯ್ತು. ನೀವೆಲ್ಲ ಊರಲ್ಲಿದ್ದಿರಿ ಅಂತ ಇಷ್ಟು ದಿನವಾದ್ರೂ ಹೇಗೋ ಇದ್ದೆ. ಇಲ್ಲದಿದ್ರೆ ಏನೇನು ಆಗ್ತಿತ್ತೋ ದೇವರಿಗೇ ಗೊತ್ತು.

ನೀಲಮಣಿ ಪತ್ನಿ— ಹಾಗೆ ಮಾತಾಡಬೇಡ. ಕಡೆಗೂ ನಿಮ್ಮನ್ನು ಊರಿನಲ್ಲಿಟ್ಟುಕೊಳ್ಳೋದು ನಮಗೆ ಆಗಲಿಲ್ಲ.

ಸರ್ವಜಯಾ— ಅದು ನಿಮ್ಮ ತಪ್ಪಾ? ನಮ್ಮ ದುರದೃಷ್ಟ ಅಷ್ಟೆ. ಇಲ್ಲದೆ ಇದ್ರೆ, ಈ ಊರಲ್ಲೇ ಎಷ್ಟು ಜನ ಸುಖವಾಗಿ ನೆಮ್ಮದಿಯಾಗಿ ಬದುಕ್ತಾ ಇಲ್ಲ?

ನೀಲಮಣಿ ಪತ್ನಿ— ಏನೋ. ಇನ್ನಾದರೂ ನಿಮಗೆ, ಎಲ್ಲೇ ಇರಲಿ, ಸುಖವಾಗಿ ಇರೋ ಹಾಗೆ ಆಗಲಪ್ಪಾ........ ಅಷ್ಟಲ್ಲದೆ ನಾ ಮತ್ತೇನು ಹೇಳಲಿ ?

ಶೇಜ್‌ಬೌ, ಒಂದು ಬುಟ್ಟಿ ಮಾವಿನಹಣ್ಣು ಕೈಯಲ್ಲಿ ಹಿಡಿದು ಪ್ರವೇಶಿಸುತ್ತಾಳೆ.

ಶೇಜ್‌ಬೌ— ಹೇಗಿದೀಯ ?

ಸರ್ವಜಯಾ— ಬನ್ನಿ, ಕೂತ್ಕೊಳ್ಳಿ.

ಶೇಜ್‌ಬೌ— ಇರ್ಲಿ, ಕೂತರಾಯ್ತು. ನಿಮಗೆ ಪ್ರಯಾಣಕ್ಕೆ ಇರಲಿ ಅಂತ ಒಂದಿಷ್ಟು ಮಾವಿನಹಣ್ಣು ತಂದಿದೇನೆ. ಅವತ್ತಿನ ಗಾಳಿ ಹೊಡೆತದಲ್ಲಿ ತುಂಬಾ ಉದುರಿದ್ದವು.

ಸರ್ವಜಯಾ— ಯಾಕೆ ಅಷ್ಟೆಲ್ಲಾ ತೊಂದರೆ ?

ಶೇಜ್‌ಬೌ— ಪರವಾಯಿಲ್ಲ ಬಿಡು. ನಾ ಯಾವತ್ತೂ ನಿಮಗೆ ಏನನ್ನೂ ತಗೊಳ್ಳಿ ಅಂತ ಕೊಟ್ಟಿಲ್ಲ. ನಾಲ್ಕು ಮಾವಿನಹಣ್ಣು ಅಷ್ಟೆ.... ನಾಳೇನೇ ಹೊರಡ್ತೀರಾ ?

ಸರ್ವಜಯಾ— ನಾನು ನಿಮಗೆ ಹೇಳಲಿಲ್ಲ ಅಂತ ಬೇಸರ ಆಗಿರ್ಬಹುದು.

ಶೇಜ್‌ಬೌ— ಅಯ್ಯೋ, ಬೇಸರ ಯಾಕಮ್ಮಾ ? ನಿಜವಾಗಿ ನೀವು ಹೋಗ್ತಾ ಇರೋದು ನನಗೆ ದುಃಖವೇನಲ್ಲ. ಒಂದೇ ಜಾಗದಲ್ಲಿ ಅಂಟಿ ಕೂತಿರೋದು ಪ್ರಯೋಜ್ನ ಇಲ್ಲ. ಅದರಿಂದ ಮನುಷ್ಯರು ಅಲ್ಪರಾಗಿ ಬಿಡ್ತಾರೆ. ನನ್ನನ್ನ ನೋಡಿಕೊಂಡ್ರೇ ಸಾಕು, ನನಗೇ ತಿಳಿಯತ್ತೆ. ನನಗೂ, ಇಲ್ಲಿ ಬಿಟ್ಟು ಎಲ್ಲಿಗಾದರೂ ಹೋಗಲು ಆದೀತಾ ಅಂತ ಯೋಚನೆ........ ಏನೋ ನೋಡ್ಬೇಕು.

ಹೊರಗೆ, ನಾಲ್ಕು ಜನ ಊರಿನ ಹಿರಿಯರು ಅಂಗಳದೊಳಕ್ಕೆ ಪ್ರವೇಶಿಸುತ್ತಿದ್ದಾರೆ. ಹರಿಹರ ಅವರನ್ನು ಸ್ವಾಗತಿಸಿ ಕೂರಲು ಹೇಳುತ್ತಾನೆ.

ಮಜುಂದಾರ್— ಇರ್ಲಿ ಬಿಡು, ಇರ್ಲಿ ಬಿಡು, ಪರವಾಯಿಲ್ಲ.

ಹರಿಹರ— ಚಕ್ರವರ್ತಿ ಮಹಾಶಯ, ಬನ್ನಿ ಕೂತ್ಕೊಳ್ಳಿ.

ಮಜುಂದಾರ್—ಏನೋ ಪಿತ್ಥರೋಗ ಹಿಡಿದು ಒಂದೂವರೆ ತಿಂಗಳಿಂದ ಮನೇಲೇ ಹಾಸಿಗೆಹಿಡಿದು ಕೂರಬೇಕಾಯ್ತು. ತುಂಬ ಸೋತುಹೋದೆ.... ಚಕ್ರವರ್ತಿ ಹೇಳಿದ, ನೀನು ಬನಾರಸಿಗೆ ಹೋಗ್ತಾ ಇದ್ದೀ

ಯಂತೆ....

ಹರಿಹರ— ಹೌದು, ನಾಳೆ ಬೆಳಿಗ್ಗೆ ಮುಂಚೆ....

ಮಜುಂದಾರ್—ನಾಳೇನಾ? ಹರಿಹರ, ಹಾಗೆ ಮಾಡೋದು ಸರೀನಾ? ನೀನು ಯಾರಪ್ಪಾ ಅಂದ್ರೆ, ರಾಜಕೃಷ್ಣನ ಮಗ, ಮಹಾಪಂಡಿತನ ಮೊಮ್ಮಗ. ಮೂರು ತಲೆಮಾರಿನಿಂದ ಈ ಮನೆ ನಿಮ್ಮ ಮನೆತನದ್ದಾಗಿ ಬಂದಿದೆ.... ನಾವೆಲ್ಲ ಜೀವಂತವಾಗೇ ಇದ್ದೇವೆ. ನಮ್ಮನ್ನೂ ಒಂದು ಮಾತು ಕೇಳಬಹುದಿತ್ತು....

ಹರಿಹರ— ಯಾವುದರ ಬಗ್ಗೆ ಕೇಳೋದು ? ಈ ಮನೆ ಪರಿಸ್ಥಿತಿ ಏನಾಗಿದೆ ಅನ್ನೋದು ನಿಮಗೆ ಗೊತ್ತಾಗುತ್ತಿಲ್ಲ.... ಇದನ್ನ ರಿಪೇರಿ ಮಾಡಿಸೋ ಶಕ್ತಿ ಕೂಡಾ ನನ್ನಲ್ಲಿಲ್ಲ. ಒಂದು ವೇಳೆ, ನಿಮ್ಮನ್ನೆಲ್ಲಾ ಕೇಳಿದ್ರೆ ನಿಮ್ಮ ಸಹಾಯ ಸಿಗತಿತ್ತೋ ಏನೋ. ಆದರೆ, ಹಾಗೆ ಎಷ್ಟು ದಿನ ಕಳೆಯೋಕೆ ಸಾಧ್ಯ ? ಹೀಗೇ ಕಳೆದದ್ದಾದರೂ ಕಡಿಮೆ ದಿನವಾ ? ಹೆಚ್ಚೂಕಡಿಮೆ ಹದಿನೈದು ವರ್ಷ ಆಯ್ತು. ಹೇಗಾದ್ರೂ ಸಾಲಗಳನ್ನ ತೀರಿಸಿ ಮುಗಿಸೋಣ ಅಂತ ಇದ್ದೆ. ಈಗ ಅದೂ ಸಾಧ್ಯವಿಲ್ಲ. ಈ ನನ್ನ ಆಸ್ತೀನೆಲ್ಲಾ ಮಾರಿದರಾದ್ರೂ ಆಗುತ್ತೋ ನೋಡ್ತೇನೆ. ನನಗಿದ್ದ ಆಸೆಯೆಲ್ಲಾ ನೀರಿನಲ್ಲಿ ಹೋಮ ಮಾಡಿದಹಾಗಾಯ್ತು. ಪಾಂಡಿತ್ಯ ಗಳಿಸಿಕೋಬೇಕು ಅಂತ ಆಸೆ ಇತ್ತು.... ಇಲ್ಲಿ ನೋಡಿ ಎಲ್ಲಾ ಗೆದ್ದಲು ಪಾಲಾಗಿದೆ. ನನ್ನ ಮಗನಿಗೆ ವಿದ್ಯೆ ಕಲಿಸಬೇಕು ಅಂತ ಇತ್ತು. ಅದೂ ಆಗಲಿಲ್ಲ. ನನ್ನ ಮಗಳು, ನನಗೇ ಮಾಯಕ ಮಾಡಿ ಜಾರಿಕೊಂಡು ಬಿಟ್ಲು.... ಈಗ ಇಲ್ಲಿಂದ ಹೊರಡೋದೇ ಒಳ್ಳೇದು. ಈ ಮನೆಯಿಂದ ದೂರವಾಗೋದೇ ಒಳ್ಳೇದು ಅನ್ನಿಸುತ್ತೆ. ಅಲ್ಲಿ ಹೋಗಿ, ಮತ್ತೇನೂ ಆಗದಿದ್ರೂ, ನದೀ ತೀರದಲ್ಲಿ ಕೂತು ಮಂತ್ರಪಠನವಾದರೂ ಮಾಡಿ, ಸ್ವಲ್ಪ ಹಣವನ್ನಾದೂ ಗಳಿಸಬಹುದ್ದು.

ಮಜುಂದಾರ್.— ಆಮೇಲಾದ್ರೂ ಊರಿಗೆ ಬರ್ತೀಯೆ, ಅಲ್ಲವಾ ?

ಹರಿಹರ— ನನ್ನ ಜೀವಮಾನದಲ್ಲಂತೂ ಇಲ್ಲ. ಇನ್ನು, ನನ್ನ ಮಗ ಏನಾದ್ರೂ, ದೊಡ್ಡವನಾಗಿ ಇಲ್ಲಿಗೆ ಬರೋದಾದ್ರೆ....

ಮಲಗುವ ಕೋಣೆಯಲ್ಲಿ— ಅಪೂ, ಒಂದು ಕಪಾಟಿನ ಮೇಲಿನ ಖಾನೆಯಲ್ಲಿರುವ ತೆಂಗಿನ ಚಿಪ್ಪನ್ನು ಕಷ್ಟಪಟ್ಟು ಕೈ ನೀಡಿ ಹೊರಕ್ಕೆ ತೆಗೆಯುತ್ತಿದ್ದಾನೆ. ಆದರಿಂದ ಏನೋ ಕೆಳಕ್ಕೆ ಬೀಳುತ್ತದೆ. ನೋಡಿದರೆ, ಚಿಪ್ಪನ್ನು ಮುಚ್ಚಿಕೊಂಡ ಜೇಡರ ಬಲೆ

ಯಿಂದ, ತುಸುಳ ಸರ ನೆಲಕ್ಕೆ ಬಿದ್ದಿದೆ. ಯಾರಾದರೂ ಕಂಡರೋ ಎಂದು ಸುತ್ತಲೂ ನೋಡುತ್ತಾನೆ. ಅನಂತರ, ಕಿಟಕಿಯ ಮೂಲಕ ಹೊರಕ್ಕೆ ಹಾರಿ ಓಡತೊಡಗುತ್ತಾನೆ. ಹೊಂಡದ ಬಳಿ ನಿಂತು ಮತ್ತೆ ಸುತ್ತಲೂ ನೋಡುತ್ತಾನೆ. ಅನಂತರ, ಸರವನ್ನು ನೀರಿನೊಳಕ್ಕೆ ಎಸೆಯುತ್ತಾನೆ. ನೀರಿನ ಮೇಲಿರುವ ಪಾಚಿ ಸರಿದು, ನೀರಿನ ಆಳಕ್ಕೆ ಸರ ಕೆಳಕ್ಕಿಳಿಯುತ್ತ ಹೋಗುತ್ತದೆ; ಆಮೇಲೆ ಆ ರಹಸ್ಯವನ್ನು ಅಡಗಿಸಿಕೊಳ್ಳುವಂತೆ ಮತ್ತೆ ಪಾಚಿ ಸರಿದು ಮುಚ್ಚಿಕೊಳ್ಳುವುದನ್ನೇ ನೋಡುತ್ತ ನಿಲ್ಲುತ್ತಾನೆ.

## ಕ್ಷಯುವರ್ಧನ

ಮನೆಯ ಅಂಗಳ ಈಗ ಸಂಪೂರ್ಣ ಬರಿದಾಗಿದೆ. ಒಂದು ನಾಯಿ ಮಾತ್ರ ಅಲ್ಲಿ ನಿಂತಿದೆ. ಒಂದು ಹಾವು, ಕಲ್ಲುಗಳ ಇಡುಕಿನಲ್ಲಿ ಹರಿದು ಬರುತ್ತಿದೆ. ಆಮೇಲೆ ಅದು ಮೆಲ್ಲಗೆ ಮಲಗುವ ಕೋಣೆಯೊಳಕ್ಕೆ ಪ್ರವೇಶಿಸುತ್ತದೆ.

ಇನ್ನೊಂದು ಕಡೆ, ದಾರಿಯಲ್ಲಿ— ಎತ್ತಿನ ಬಂಡಿ ಸಾಗುತ್ತಿದೆ. ಅದರಲ್ಲಿ, ಹರಿಹರನ ಕುಟುಂಬ ಊರುಬಿಟ್ಟು ಹೊರಟಿದೆ. ಎಲ್ಲರೂ ಕಡೆಯದಾಗಿ ಒಮ್ಮೆ ಮನೆಯ ಕಡೆ ನೋಡತೊಡಗಿದ್ದಾರೆ. ಶಟ್ಟನೆ, ಸರ್ವಜಯಾ ವಿಹ್ವಲಳಾಗುತ್ತಾಳೆ. ಹರಿಹರ ಮತ್ತೂ ಒಮ್ಮೆ ಮನೆಯ ಕಡೆ ನೋಡಿ, ಆಮೇಲೆ, ದೂರ ಎಲ್ಲೋ ನೋಡತೊಡಗುತ್ತಾನೆ. ಗಾಡಿ ಸಾಗಿ ಮರೆಯಾಗತೊಡಗಿದೆ.

END



# ಪಥೇರ್ ಪಾಂಚಾಲಿ • ಚಿತ್ರಲೇಖನ

ವಿಶ್ವ ಚಲನಚಿತ್ರಕ್ಕೆ ಇಂಡಿಯಾ ಕೊಟ್ಟ ಮೊತ್ತ ಮೊದಲ ಗಣನೀಯ ಕಾಣಿಕೆ, ಸತ್ಯಜಿತ್ ರಾಯ್ ಅವರ ಪಥೇರ್ ಪಾಂಚಾಲಿ. ಅದು ಹೊರಬಂದದ್ದು ೧೯೫೫ರಲ್ಲಿ. ಸಿನೆಮಾ ಮಾಧ್ಯಮದ ಮೇಲೆ ಸಂಪೂರ್ಣ ಹತೋಟಿ ಪಡೆದುಕೊಂಡು, ವಿಶ್ವ ಚಲನಚಿತ್ರ ಪರಂಪರೆಯಲ್ಲಿ ರಾಯ್ ಸೃಷ್ಟಿಸಿದ ಈ ಚಿತ್ರ, ಮೊತ್ತ ಮೊದಲ ಬಾರಿಗೆ, ಇಂಡಿಯಾದ ಚಲನಚಿತ್ರದ ಕಡೆಗೆ ವಿಶ್ವದ ಗಮನವನ್ನು ಸೆಳೆಯಿತು. ಈಗ, ಈ ಚಿತ್ರ ವಿಶ್ವ ಚಲನಚಿತ್ರದ ಮೇರು ಕೃತಿಗಳಲ್ಲಿ ಒಂದೆಂದು ಭವ್ಯ ಸ್ಥಾನ ಪಡೆದುಕೊಂಡಿದೆ.

ಬಂಗಾಳದ ನವೋದಯ ಸಾಹಿತ್ಯದಲ್ಲಿ ಪ್ರಸಿದ್ಧರಾದ ಬಿಭೂತಿಭೂಷಣ ಬ್ಯಾನರ್ಜಿ ಅವರು ೧೯೩೦ ರ ದಶಕದಲ್ಲಿ ರಚಿಸಿದ ಇದೇ ಹೆಸರಿನ ಪ್ರಖ್ಯಾತ ಕಾದಂಬರಿಯನ್ನಾಧರಿಸಿ ಈ ಚಿತ್ರ ರಚಿತವಾಗಿದೆ.

ಇಂಡಿಯಾದ ಚಲನಚಿತ್ರ ಪ್ರಪಂಚದಲ್ಲಿ ಹೊಸ ಮನ್ವಂತರವನ್ನೇ ತೆರೆದ ಈ ಚಿತ್ರದ ಚಿತ್ರಲೇಖನವನ್ನು ಇಲ್ಲಿ ಅನುವಾದಿಸಿಕೊಟ್ಟಿದೆ. ಅಭ್ಯಾಸಿಗಳಿಗೆ ಅತ್ಯಗತ್ಯವೆನಿಸುವ ಈ ಪುಸ್ತಕ ಸಾಮಾನ್ಯ ಓದುಗರಿಗೂ ಕುತೂಹಲಕಾರಿಯಾಗುವಂತಿದೆ.

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ